# CATECHISM

OF THE

# GEOGRAPHY AND HISTORY

OF

# MAHARASHTRA.

ಮಹಾರಾಷ್ಟ್ರ ವರ್ಣನೆ ಚರಿತ್ರೆಗಳ

ಪ್ರಶ್ನೋತ್ತರಗಳು.

ಬೆಂಗಳೂರು
ವೆಸ್ಲಿಯನ್ ಮಿಶನ್ ಅಚ್ಚು ಕೂಟದಲ್ಲಿ ಛಾಪಿಸಿದ್ದು.
೧೮೬೮.

BANGALORE:
PRINTED FOR THE BOMBAY EDUCATIONAL
DEPARTMENT,
BY W. W. GAUNT, AT THE WESLEYAN MISSION PRESS,
1868.

# CATECHISM

OF THE

# GEOGRAPHY AND HISTORY

OF

# MAHARASHTRA.

ಮಹಾರಾಷ್ಟ್ರ ವರ್ಣನೆ ಚರಿತ್ರಗಳ

ಪ್ರಶ್ನೋತ್ತರಗಳು.

ಬೆಂಗಳೂರು

ವೆಸ್ಲಿಯನ್ ಮಿಶನ್ ಅಚ್ಚು ಕೂಟದಲ್ಲಿ ಛಾಪಿಸಿದ್ದು.

೧೮೬೮.

BANGALORE:

PRINTED BY W. W. GAUNT, AT THE WESLEYAN MISSION PRESS, 1868.

# ಮಹಾರಾಷ್ಟ್ರ ದೇಶದ ವರ್ಣನೆಯೂ, ಚರಿತ್ರೆಯೂ.

---

## ಮೊದಲನೇ ಭಾಗವು.

೧. ಪ್ರಶ್ನೆ. ಮಹಾರಾಷ್ಟ್ರ ದೇಶವು ಯಾವ ಕಡೆಯಲ್ಲಿ ಇಧೆ?

ಉ. ದಕ್ಷಿಣ ಹಿಂದೂಸ್ಥಾನದೊಳಗೆ ಇಧೆ.

೨. ದಕ್ಷಿಣ ಹಿಂದೂಸ್ಥಾನವಂದರೆ ಏನು?

ನರ್ಮದಾ ನದಿಯು ಮಹಾ ನದಿಯು ದಕ್ಷಿಣ ದಿಕ್ಕಿನಲ್ಲಿ ಇರುವ ದೇಶವು.

೩. ದಕ್ಷಿಣ ಹಿಂದೂಸ್ಥಾನದ ಯಾವ ಕಡೆಗೆ ಮಹಾರಾಷ್ಟ್ರ ದೇಶ ಇಧೆ?

ವಾಯುವ್ಯ ದಿಕ್ಕಿಗೆ ಇಧೆ.

೪. ಈ ಮಹಾರಾಷ್ಟ್ರ ದೇಶದ ಮೇರೆಗಳು ಎಲ್ಲಿಂದ ಎಲ್ಲಿಯ ತನಕ ಇವೆ?

ಈ ದೇಶದ ಉತ್ತರಕ್ಕೆ ಸಾತಪುಡಾ ಎಂಬ ಒಂದು ಬೆಟ್ಟ ಇಧೆ. ಪೂರ್ವಕ್ಕೆ ವಾಯಿನ ಗಂಗಾ, ವರಧಾ ಎಂಬ ಎರಡು ನದಿಗಳು ಇವೆ. ಆಗ್ನೇಯ ದಿಕ್ಕಿಗೆ ಮಹೂರೆ ಎಂಬ ಊರ ಹಿಡಿದು, ಗೋವೆಯ ವರಿಗೂ ಸೊಟ್ಟವಾದ ಮೇರೆ ಇಧೆ. ಪಶ್ಚಿಮಕ್ಕೆ ಅರಬ್‌ಸ್ಥಾನದ ಸಮುದ್ರ ಇಧೆ. ಇವೇ ಮಹಾರಾಷ್ಟ್ರ ದೇಶದ ಮೇರೆಗಳು.

೫. ಈ ದೇಶಕ್ಕೆ ಹೊಂದಿ ಯಾವ ಯಾವ ದೇಶಗಳುಂಟು, ಅವುಗಳಲ್ಲಿ ಯಾವ ಭಾಷೆಗಳು ನಡೆಯುತ್ತವೆ?

ಉತ್ತರಕ್ಕೆ ದವಮಾನ ಬಂದರದಿಂದ ಆಚೆ ಗುಜರಾತ ದೇಶವದೆ, ಅಲ್ಲಿ ಗುಜರಾತಿ ಭಾಷೆಯು; ಉತ್ತರಕ್ಕೆ ನೇಮಾಡವೂ, ಪೂರ್ವಕ್ಕೆ ಗೊಂಡವಣದ ಅಡಿವೆಯೂ ಉಂಟು. ಪೂರ್ವಕ್ಕೆ ತೈಲಂಗಣವೂ, ದಕ್ಷಿಣಕ್ಕೆ ಕರ್ನಾಟಕವೂ; ಅವುಗಳಲ್ಲಿ ತೈಲಂಗಿ, ಕರ್ನಾಟಕ ಭಾಷೆಗಳು ನಡೆಯುತ್ತವೆ.

೬. ಈ ದೇಶದ ಆಕಾರವು ಹ್ಯಾಗೆ ಇಧೆ?

ಮುಮ್ಮಾಲೆಯಾಗಿಧೆ.

೩. ಈ ದೇಶವು ಪೂರ್ವ ಪಶ್ಚಿಮ ಎಷ್ಟು ಹರಿದಾರಿ ದೂರವಿಧೆ?

ಇನ್ನೂರು ಹರಿದಾರಿ ದೂರವಿಧೆ.

೪. ಉತ್ತರ ದಕ್ಷಿಣ ಎಷ್ಟು ಹರಿದಾರಿ ದೂರವಿಧೆ?

ಸುಮಾರು ಇನ್ನೂರು ಹರಿದಾರಿ ದೂರವಿಧೆ.

೫. ಈ ದೇಶದಲ್ಲಿ ಎಷ್ಟು ಪ್ರಜೆಗಳು ಇದ್ದಾರೆ? ಯಾವ ಯಾವ ಜಾತಿಯುವರು?

ಸುಮಾರು ೬೦ ಲಕ್ಷ ಪ್ರಜೆಗಳಿದ್ದಾರೆ. ಇವರಲ್ಲಿ ಇಪ್ಪತ್ತರಲ್ಲಿ ಹತ್ತೊಂಭತ್ತು ಭಾಗ ಹಿಂದೂ ಜನರು; ಉಳಿದ ಒಂದು ಭಾಗ ಮುಸಲ್ಮಾನರು ಮುಂತಾದವರು. ಮತ್ತು ಈ ದೇಶದಲ್ಲಿ ಎರಡು ಜಾತಿ ಬ್ರಾಹ್ಮರು ಇದ್ದಾರೆ. ಒಂದು ಜಾತಿಯುವರು ಕೊಂಕಣಸ್ಥರು, ಇನ್ನೊಂದು ಜಾತಿಯುವರು ದೇಶಸ್ಥರು. ಈ ಉಭಯ ಜಾತಿಗಳಲ್ಲಿ ಒಬ್ಬರಿಗೊಬ್ಬರು ಹೆಣ್ಣು ಕೊಡ ಕೂಡದೆಂದು, ಇವರ ಪೂರ್ವಿಕರು ನಿಬಂಧನೆ ಮಾಡಿ ಇದ್ದಾರೆ.

೧೦. ಈ ಮಹಾರಾಷ್ಟ್ರ ದೇಶವು ಎಷ್ಟು ಭಾಗ ವಾಗಿ ವಿಭಾಗಿಸಲ್ಪಟ್ಟು ಇಧೆ?

ಎರಡು ಭಾಗಗಳಾಗಿ ವಿಭಾಗಿಸಲ್ಪಟ್ಟು ಇಧೆ. ಪಶ್ಚಿಮ ದಿಕ್ಕಿನ ಭಾಗವು ಕೊಂಕಣ ಎಂದೂ ಪೂರ್ವ ದಿಕ್ಕಿನ ಭಾಗವು ದೇಶ ಎಂದೂ, ಹೇಳು ತ್ತಾರೆ. ಈ ಎರಡು ದೇಶಗಳ ನಡುವೆ ಸಹ್ಯಾದ್ರಿ ಎಂಬ ಬೆಟ್ಟವು ಇಧೆ.

೧೧. ಈ ಸಹ್ಯಾದ್ರಿ ಪರ್ವತವು ಹ್ಯಾಗೆ ವರ್ಣಿ ಸಲ್ಪಟ್ಟು ಇಧೆ?

ತಾಪೀ ನದಿಯು ಹಿಡಿದು, ಕನ್ಯಾ ಕುಮಾರಿ ಎಂ ಬ ಕೇಪದ ಪರ್ಯಂತರಕ್ಕೂ ಇರುವ ಗುಡ್ಡದ ಸಾ ಲುಗಳೇ ಸಹ್ಯಾದ್ರಿ ಎಂದು ಹೇಳುವದು. ಮತ್ತು ಈ ಪರ್ವತಕ್ಕೆ ಶೇರಿ ಇರುವ ಮಹಾ ಬಲೇಶ್ವರ ವೇ ಮೊದಲಾದ ಕೆಲವು ಶಿಖರಗಳು ಸಮುದ್ರದಿಂ ದ ೪೦೦೦ ಮೊಳ ಎತ್ತರವಾಗಿಯೂ, ಕಡಿಮೆ ಭಾಗಗಳು ಸುಮಾರು ೨೦೦೦ ಮೊಳ ಎತ್ತರವಾ ಗಿಯೂ ಇಧೆ. ಇದಲ್ಲದೆ ತಳೇ ಘಟ್ಟದ ಹತ್ತರ

ಕಳಸುಬಾಯಿ ಎಂಬ ಬೆಟ್ಟವು ೪೫೦೦ ಮೊಳ ವುಳ್ಳದ್ದಾಗಿ, ಮೇಲೆ ಹೇಳಿದ್ದಕ್ಕಿಂತಲೂ ಎತ್ತರ ವಾಗಿ ಇಧೆ. ಈ ಪರ್ವತ ದಾಟಿ, ಕೊಂಕಣ ದೇಶದಿಂದ ದಕ್ಷಿಣ ದೇಶಕ್ಕೆ ಬರುವ ಮಾರ್ಗವನ್ನು ಘಟ್ಟವೆಂದು ಹೇಳುತ್ತಾರೆ. ಈ ದಕ್ಷಿಣ ದೇಶದ ಭೂಮಿಯು ಸಮುದ್ರದ ಸಪಾಟಗಿಂತ ೧೪೦೦ ಮೊಳ ಎತ್ತರವಾಗಿ ಇಧೆ. ಇದರ ಪೂರ್ವ ದಿಕ್ಕಿನ ಭೂಮಿಯೂ ಇಳಿತರವಾಗಿ ಇಧೆ.

೧೨. ಕೊಂಕಣ ದೇಶವು ಎಷ್ಟು ಅಡ್ಡಗಲವಾಗಿ ಇಧೆ?

ಸಮುದ್ರ ಹಿಡಿದು, ಘಟ್ಟದ ಪರ್ಯಂತರಕ್ಕು ಕೆಲವು ಕಡೆ ಹತ್ತು ಹನ್ನೆರಡು ಹರಿದಾರಿ ದೂರ ವಾಗಿಯೂ, ಕೆಲವು ಕಡೆ ೨೦-೨೫ ಹರಿದಾರಿ ದೂರವಾಗಿಯೂ, ಇಧೆ.

೧೩. ಮಹಾರಾಷ್ಟ್ರ ದೇಶದಲ್ಲಿರುವ ದೊಡ್ಡ ದೊಡ್ಡ ನದಿಗಳು ಯಾವ್ಯಾವವು?

ಉತ್ತರ ದಿಕ್ಕಿಗೆ ನರ್ಮದಾ ನದಿ ಇಧೆ; ಮ

ತ್ತು ಖಾನ ದೇಶದಲ್ಲಿ ತಾಪೀ ನದಿ ಇಧೆ. ಈ ನದಿಗೆ ಬೇರೆ ಸಣ್ಣ ಸಣ್ಣ ನದಿಗಳು ಕಲತು, ಇದರ ಪ್ರವಾಹವು ಪಶ್ಚಿಮಕ್ಕೆ ಹರಿದು ಹೋಗುತ್ತದೆ. ಈ ಸಣ್ಣ ನದಿಗಳ ಪೈಕಿ ಗಿರಣಾ ನದಿಯು ಸ್ವಲ್ಪ ಪ್ರಸಿದ್ಧಿಯಾಗಿ ಇಧೆ.

ಮತ್ತು ಈ ತಾಪೀ ನದಿಯ ದಕ್ಷಿಣಕ್ಕೆ ಗೋದಾವರಿ ನದಿ ಉಂಟು. ಈ ನದಿಯು ತ್ರಯಂಬಕೇಶ್ವರದಿಂದ ಹುಟ್ಟಿ, ಮಹಾರಾಷ್ಟ್ರ ದೇಶದಲ್ಲಿರುವ ಪಹಿರ, ಮಾಂಜರ, ಎಂಬ ನದಿಗಳನ್ನೂ ಇನ್ನು ಸಣ್ಣ ಸಣ್ಣ ನದಿಗಳನ್ನೂ ತನ್ನೊಡನೆ ಕೂಡಿಸಿ ಕೊಂಡು, ಪೂರ್ವ ಕಡೆಗೆ ಹರಿದು ಹೋಗುತ್ತೆ. ಗೋದಾವರಿಯ ತೀರದ ಪ್ರದೇಶವು ಗಂಗಥಡಿ ಎಂದು ಅನ್ನಿಸಿ ಕೊಂಡಿದೆ. ಮತ್ತು ಈ ಗೋದಾವರಿಯ ತಾಪೀ ನದಿಯ ನಡುವೆ ಚಾಂದವಾಡ ದಗುಡ್ಡಗಳ ಮೇರೆಗಳಿವೆ. ಇವಗಳೊಳಗಿಂದ ಖಾನ ದೇಶಕ್ಕೆ ಹೋಗುವ ಮಾರ್ಗವು ಇಧೆ.

ಮತ್ತು ಇದರ ದಕ್ಷಿಣಕ್ಕೆ ಭೀಮಾ ನದಿ ಇಧೆ.

ಇದು ಭೀಮಾ ಶಂಕರದಿಂದ ಹುಟ್ಟಿ, ಪೂರ್ವ ದಿಕ್ಕಿಗೆ ಹರಿದು ಹೋಗುತ್ತದೆ. ಈ ನದಿಗೆ ಸತಾರೆಯ ಉತ್ತರ ದಿಕ್ಕಿಗೆ ಇರುವ ಪರ್ವತಗಳೂ, ಗಂಗಥಡಿಯ ದಕ್ಷಿಣ ದಿಕ್ಕಿಗೆ ಅಹಮ್ಮದ ನಗರದ ಬಳಿಯಲ್ಲಿರುವ ಪರ್ವತಗಳೂ, ಇವುಗಳ ನಡುವೆ ಇರುವ ಎಲ್ಲಾ ನದಿಗಳೂ ಸಹ ಕೂಡಿ ಇವೆ. ಇವುಗಳ ಹೆಸರುಗಳು ಶೀನಾ, ಘೋಡ, ಇಂದ್ರಾಯಣಿ ಮುಠಾಮುಳಾ, ನೀರಾ, ಮಾಣ. ಈ ನೀರಾ ನದಿಯು ಪ್ರದೇಶವು ಪುಣೆ ಸತಾರೆಯ ಗುಡ್ಡಗಳ ನಡುವೆ ಇಧೆ.

ದಕ್ಷಿಣಕ್ಕೆ ಕೃಷ್ಣಾ ನದಿ ಇಧೆ. ಇದು ಮಹಾಬಲೇಶ್ವರದ ಗುಡ್ಡದಲ್ಲಿ ಹುಟ್ಟಿ, ಆಗ್ನೇಯ ದಿಕ್ಕಿಗೆ ಹರಿದು ಹೋಗುತ್ತೆ. ಇದರಲ್ಲಿ ವೇಣ್ಯಾ, ಕೋಯನಾ, ಘಟಪ್ರಭಾ, ಮಲಪ್ರಭಾ, ಪಂಚಗಂಗಾ, ಎಂಬ ಸಣ್ಣ ನದಿಗಳು ಕಲೆಯುತ್ತವೆ.

೧೪. ಮಹಾರಾಷ್ಟ್ರ ದೇಶದ ಹವ ಹ್ಯಾಗೆ ಇಧೆ?

ಶರೀರಕ್ಕೆ ಆರೋಗ್ಯವಾಗಿದೆ. ಮತ್ತು ಆ

ದೇಶದಲ್ಲಿ ಬೆಟ್ಟ ಗುಟ್ಟಗಳು ಬಹಳವಾಗಿ ಇರುವ ದರಿಂದ, ಈ ದೇಶದ ಬೆಳೆಯು ಹಿಂದುಸ್ಥಾನಕ್ಕೆ ಸೇರಿದ ಬೇರೆ ದೇಶಗಳಿಗಿಂತ ನಡುತರವಾಗಿದೆ.

೧೫. ಮಹಾರಾಷ್ಟ್ರ ದೇಶದಲ್ಲಿ ಮುಖ್ಯವಾಗಿ ಯಾವ ಯಾವ ಜಿನಸುಗಳು ಉತ್ಪತ್ತಿಯಾಗುತ್ತವೆ?

ಅರಳೆ, ಸಕ್ಕರೆ, ರೇಶ್ಮೆ ಮುಂತಾದ ಹಿಂದೂಸ್ಥಾನದಲ್ಲಿ ಮುಖ್ಯವಾಗಿ ಬೆಳೆಯು, ಇನ್ನು ಕೆಲವು ಪದಾರ್ಥಗಳು, ಇದ್ದ ಮಟ್ಟಿಗೆ ಬೆಳೆಯುತ್ತವೆ. ಇಲ್ಲಿನ ಜನರು ತಮ್ಮ ಸ್ವಂತ ಉಪಯುಕ್ತಕ್ಕೆ ಸಾಕಾದಷ್ಟು ಬೆಳ ಕೊಳ್ಳುತ್ತಾರೆ. ಆದರೆ ಗುಜರಾಥ, ನಾಗಪುರ, ಬಾಲೆಘಾಟೆ ಮೊದಲಾದ ಹಿಂದೂಸ್ಥಾನದ ಅರಳೆಯೂ, ಮಾಳವ ದೇಶದ ಅಫೀಮು ಸಹ, ಬೊಂಬಾಯಿಗೆ ಕಳುಹಿಸಲ್ಪಟ್ಟು, ಅಲ್ಲಿಂದ ಮುಂದಕ್ಕೆ ಇಂಗ್ಲಾಂಡ ದೇಶಕ್ಕೂ ಚೀನಾ ದೇಶಕ್ಕೂ ರವಾನೆಯಾಗುತ್ತದೆ. ಮತ್ತು ಘಟ್ಟದ ಮೇಲಣ ದೇಶದಲ್ಲಿ ಗೋಧಿಯೂ ಜೋಳವೂ ಸಜ್ಜೆಯೂ

ಮುಂತಾದ್ದು ಬೆಳೆಯುತ್ತದೆ. ಕೊಂಕಣ ದೇಶದ
ಲ್ಲಿ ಸೋನೆ ಮಳೆ ಸುರಿಯುವದರಿಂದ, ಅಲ್ಲಿ ನೆಲ್ಲು
ಬೆಳೆ ಬಹಳ ಚನ್ನಾಗಿ ಅಗುತ್ತದೆ.

೧೬. ಮಹಾರಾಷ್ಟ್ರ ದೇಶದ ಜನರ ಪ್ರಕೃತಿ
ಎಂಥಾದ್ದು?

ಈ ದೇಶದ ಜನರ ಕಾಯ ಶಕ್ತಿಯು ಇತರ
ಹಿಂದೂಸ್ಥಾನದ ಜನಗಳಿಗಿಂತ ಬಲವಾಗಿದೆ. ಆದ
ರೆ ಈ ದೇಶದಲ್ಲಿ ಬೆಳೆ ಮುಂತಾದ್ದು ಕಮ್ಮಿಯಾ
ದದರಿಂದ, ಇತರ ದೇಶಗಳಿಗೆ ಹೋಗಿ, ಕೊಳ್ಳೆ
ಮಾಡುವರು.

೧೭. ಮಹಾರಾಷ್ಟ್ರ ದೇಶದಲ್ಲಿ ಯಾರ ಯಾರ
ಪ್ರಭುತ್ವ ಇಧೆ?

ಪೂರ್ವ ದಿಕ್ಕಿನ ಒಂದು ಭಾಗ ಹೈದರಾಬಾ
ದು ಶೀಮೆಯ ಪ್ರಭುತ್ವದ ಕೆಳಗೆ ಇಧೆ. ದಕ್ಷಿಣ
ದಿಕ್ಕಿನ ಸಣ್ಣ ಭಾಗವು ಗೋವೆ ಶೀಮೆಗೆ ಶೇರಿದ್ದು!
ಪೋರ್ತುಗಲ್ ದೇಶದವರ ಸ್ವಾಧೀನದಲ್ಲಿ ಇಧೆ.
ಉಳಿದ ಎಲ್ಲಾ ದೇಶವು ಇಂಗ್ಲಿಷ್ ಸರಕಾರದವರ

ಸ್ವಾಧೀನದಲ್ಲಿಇಧೆ. ಈ ಪ್ರಭುತ್ವಗಳ ಮಧ್ಯ ಕೊಲ್ಲಾ ಪುರ, ಮೊದಲಾದ ಪಾಳ್ಯ ಪಟ್ಟುಗಳುಂಟು.

೧೮. ಈ ಮಹಾರಾಷ್ಟ್ರ ದೇಶದಲ್ಲಿ ರಾಣಿ ಬಹದರವರ ಕೈ ಕೆಳಗಿರುವ ದೇಶವನ್ನು ಎಷ್ಟು ಜಿಲ್ಲಾಗಳಾಗಿ ಮಾಡಿದ್ದಾರೆ? ಈ ಜಿಲ್ಲಾ ಕಚೇರಿಗಳಿರುವ ಷಹರುಗಳ ಹೆಸರೇನು?

ಹನ್ನೆರಡು ಜಿಲ್ಲಾಗಳಾಗಿ ಮಾಡಿದ್ದಾರೆ.

| ಜಿಲ್ಲಾಗಳ ಹೆಸರು. | ಜಿಲ್ಲಾ ಕಚೇರಿ ಇರುವ ಷಹರಿನ ಹೆಸರು. |
|---|---|
| ೧. ಖಾನದೇಶ. | ಧೂಳೆ. |
| ೨. ಅಹಮ್ಮದು ನಗರ. | ಅಹಮ್ಮದು ನಗರ |
| ೩. ನಾಸಿಕ ತುಕ್ಕಡಿ. | ನಾಸಿಕ. |
| ೪. ಪುಣೆ. | ಪುಣೆ. |
| ೫. ಬೆಳಗಾಂವ. | ಬೆಳಗಾಂವ. |
| ೬. ಧಾರವಾಡ. | ಧಾರವಾಡ. |
| ೭. ಉತ್ತರ ಕೊಂಕಣ. | ಠಾಣೆ. |
| ೮. ದಕ್ಷಿಣ ಕೊಂಕಣ. | ರತ್ನಗಿರಿ. |
| ೯. ಸತಾರೆ. | ಸತಾರೆ. |
| ೧೦. ಬೊಂಬಾಯಿ ನಡುಗಡ್ಡೆ. | ಬೊಂಬಾಯಿ. |
| ೧೧. ಕಲಾದಗಿ. | ಕಲಾದಗಿ. |
| ೧೨. ಉತ್ತರ ಕಾನಡಾ | ಕಾರವಾಡ. |

ಇವಲ್ಲದೆ ನಾಸಿಕ, ಸೊಲ್ಲಾಪುರ ಅಲ್ಲಿಬಾಗ ಈ ಮೂರು ತುಕಡಿಗಳು ಅಹಮದನಗರ, ಪುಣೆ, ಠಾಣೆ ಜಿಲ್ಲೆಗಳ ಭಾಗಗಳಾಗಿರುತ್ತವೆ.

೧೯. ಮಹಾರಾಷ್ಟ್ರ ದೇಶದಲ್ಲಿರುವ ದೊಡ್ಡ ದೊಡ್ಡ ಪಟ್ಟಣಗಳು ಯಾವವು?

೧. ಬೊಂಬಾಯಿ. ಇದು ಪಶ್ಚಿಮ ಹಿಂದೂಸ್ಥಾನದ ರಾಜಧಾನಿಯಾಗಿದೆ.

೨. ಪುಣೆ. ಇದು ಮೊದಲಿಗೆ ಪೇಶ್ವಾ ಸರಕಾರದವರ ರಾಜಧಾನಿಯಾಗಿತ್ತು.

೩. ಸತಾರೆ. ಇದು ಮೊದಲಿಗೆ ಸತಾರೆಯ ಅರಸಿನ ರಾಜಧಾನಿಯಾಗಿತ್ತು.

೪. ಕೊಲ್ಲಾಪುರ. ಇದು ಕೊಲ್ಲಾಪುರದ ಅರಸಿನ ರಾಜಧಾನಿಯಾಗಿರುತ್ತದೆ.

೫. ಅಹಮ್ಮದ ನಗರವು. ಇದು ಮೊದಲಿಗೆ ಮೊಹಮ್ಮದರ ಒಂದು ರಾಜಧಾನಿಯುಗಿತ್ತು.

೬. ಅವರಂಗಾಬಾದ್. ಇದು ಮೊದಲಿಗೆ ದಿಲ್ಲಿ ಸಂಸ್ಥಾನದವರ ಕೆಲವು ದೇಶಗಳಿಗೆ ಮುಖ್ಯ ಪಟ್ಟಣವಾಗಿತ್ತು.

೭. ಬರ್ಹಾಣಪುರ. ಇದು ಖಾನ ದೇಶದ ಮೊದಲಿನ ರಾಜಧಾನಿಯಾಗಿತ್ತು.

೮. ಎಲಿಚಪುರ. ಇದು ವರಹಾಡ ಪ್ರಾಂತ್ಯಕ್ಕೆ ಪೂರ್ವ ರಾಜಧಾನಿಯಾಗಿತ್ತು.

೯. ನಾಗಪುರ. ಇದು ಭೋಸಲೆ ಸರಕಾರದ ರಾಜಧಾನಿಯಾಗಿತ್ತು.

೧೦. ಬೇದರ, ಕಲಬುರಿಗೆ. ಇವು ಪೂರ್ವಕ್ಕೆ ಮುಸಲಮಾನರ ಮುಖ್ಯ ಪಟ್ಟಣಗಳಾಗಿದ್ದವು.

೧೧. ಬಿಜಾಪುರ. ಇದು ಒಬ್ಬ ತುರಕ ಅರಸಿನ ರಾಜಧಾನಿಯಾಗಿತ್ತು.

೧೨. ಗೋವೆ. ಇದು ಪೋರ್ತುಗಲವರ ಮುಖ್ಯ ಪಟ್ಟಣವಾಗಿದೆ.

೨೦. ಮಹಾರಾಷ್ಟ್ರ ದೇಶದಲ್ಲಿರುವ ಸಣ್ಣ ಸಣ್ಣ ಸಂಸ್ಥಾನಗಳ ಹೆಸರು ಏನು?

೧. ಸಾವಂತವಾಡಿ. ಇದು ಸಾವಂತನೆಂಬ ಅರಸಿನ ಮುಖ್ಯ ಗ್ರಾಮವಾಗಿದೆ.

೨. ಜಂಜಿರಾ. ಇದು ಹಪುಸಿ ಸರಕಾರದ ಮುಖ್ಯಸ್ಥಾನವಾಗಿದೆ.

3. ತಳೆಗಾಂವಾ. ಇದು ದಾಭಾಡೆ ಸೇನಾಪತಿಯ ಮುಖ್ಯ ಊರು.

೪. ಭೋರ. ಇದು ಪಂತ ಸಚೀವನೆಂಬವನ ಮುಖ್ಯ ಗ್ರಾಮವಾಗಿದೆ.

೫. ಕರ್ಹಾಡ. ಇದು ಪಂತ ಪ್ರತಿನಿಧಿ ಎಂಬವನ ಮುಖ್ಯ ಗ್ರಾಮವು.

೬. ಮುಧೋಳ. ಇದು ಘೋರ್ಪಡೆಯರ ರಾಜಧಾನಿಯು.

೭. ಮಿರ್ಜ. ಸಾಂಗಲಿ, ಜಮಖಂಡಿ, ಕುರುಂದವಾಡ ಇವು ದಕ್ಷಿಣ ಮಹಾರಾಷ್ಟ್ರದಲ್ಲಿ ಪಟ್ಟವರ್ಧನರ ಮುಖ್ಯ ಪಟ್ಣಗಳುಂಟು.

೮. ಜಂಭುರಣೆ, ಇದು ಮಾಣಿಕೇಶ್ವರರ ಮುಖ್ಯ ಗ್ರಾಮವು.

೯. ಪಾಸವಾಡ. ಇದು ಪುರಂದರೆ ಎಂಬವನ ಮುಖ್ಯ ಗ್ರಾಮವು.

೧೦. ವಿಂಚೂರ. ಇದು ವಿಂಚೂರಕರೆ ಎಂಬವನ ಮುಖ್ಯ ಗ್ರಾಮವು.

೧೧. ನಿಪಾಣಿ. ಇದು ನಿಪಾಣಿಕ ಎಂಬವನ ಮುಖ್ಯ ಗ್ರಾಮವಾಗಿತ್ತು.

೧೨. ರಾಮದುರ್ಗ. ಭಾವೆಯೆಂಬವರ ಮುಖ್ಯ ಗ್ರಾಮವು.

೧೩. ಅಂಕಲಕೋಟೆ. ಭೋಸಲೇ ಸಂಸ್ಥಾನದ ರಾಜಧಾನಿ.

೧೪. ತೊರಗಲ್ಲ ತೊರಗಲ್ಲಕರ ಯೆಂಬವರ ರಾಜಧಾನಿ.

೧೫. ಸವನೂರು. ನಬಾಬನ ಮುಖ್ಯ ಗ್ರಾಮ.

೧೬. ಫಲ್ಟೋಣಿ. ನಿಂಬಾಳಕರನ ರಾಜಧಾನಿ.

೧೭. ಜತ್ತಿ. ಡಫಳೆ ಸಂಸ್ಥಾನದ ಮುಖ್ಯ ಸ್ಥಾನ.

೨೧ ಹಿಂದೂ ಜನರಲ್ಲಿ ಪ್ರಸಿದ್ಧಿಯಾದ ಸ್ಥಳಗಳು ಯಾವ್ಯಾವವು?

ಬೊಂಬಾಯಿ ಸಮೀಪದಲ್ಲಿ ಇರುವ ಘಾರಾಪುರ ಎಂಬ ಸಣ್ಣ ನಡುಗಡ್ಡೆಯಲ್ಲಿಯೂ, ಕಾನೇರೆಂಬ ಊರಿನ ಬಳಿಯಲ್ಲಿಯೂ, ಇದರ ಸಮೀಪದಲ್ಲಿರುವ ಸಾಷ್ಟಿ ಎಂಬ ನಡುಗಡ್ಡೆಯಲ್ಲಿಯೂ ಸಹ ಪೂರ್ವಿಕರು ಬಂಡೆಗಳನ್ನು ಕೊರೆದು, ಮನೆಗಳೋಪಾದಿಯಲ್ಲಿಯೂ, ಚಿತ್ರಮಂಟಪಗಳೋಪಾದಿಯಲ್ಲಿಯೂ, ಮಾಡಿ ಇದ್ದಾರೆ. ಇವು ಬಹು ಚನ್ನಾಗಿಯೂ ಪ್ರಸಿದ್ಧಿಯಾಗಿಯೂ ಇವೆ. ಇದಲ್ಲದೆ ಪಂಡ್ರಾಪುರದ ವಿಠಲ, ಪರಳಿ, ವೈಜನಾಥ, ಆಂವಢೇನಾಗನಾಥ, ಜೋಗಾಯಿ, ಆಂಬೆ, ಟೋಕೆ, ತ್ರ್ಯಂಬಕೇಶ್ವರ, ಭೀಮಾ ಶಂಕರ, ಮಾಂಯು, ತುಳಜಾಪುರ, ಜೆಜೂರಿ, ಈ ಮುಂತಾದ ಮಹಾಸ್ಥಳಗಳು ಹಿಂದೂ ಜನರಲ್ಲಿ ಪ್ರಖ್ಯಾತಿಯಾಗಿ ಇವೆ.

೨೨. ಮಹಾರಾಷ್ಟ್ರ ದೇಶದಲ್ಲಿ ದೊಡ್ಡ ದೊಡ್ಡ ದುರ್ಗದ ಕೋಟೆಗಳೂ ನೆಲದ ಕೋಟೆಗಳೂ, ಎಷ್ಟು ಇವೆ?

ಒಂದು ಸಾವಿರ ದುರ್ಗದ ಕೋಟೆಗಳು ಇವೆ

ಅಂತೆ. ಆದರೆ ಇವುಗಳಲ್ಲಿ ಕೇವಲ ದೊಡ್ಡ ದೊಡ್ಡವುಗಳಾಗಿರುವವುಗಳ ಹೆಸರುಗಳು ಯಾವವಂದರೆ, ಅಶೀರಿಯು, ದೌಲತಾಬಾದ್, ಶಿವನೇರಿ, ಲೋಹಗಡ, ಶಿಂಹಗಡ, ಪುರಂದರ, ತೋರಣ, ರಾಜಗಡ, ಸತಾರೆ, ರಾಯಗಡ, ಪ್ರತಾಪಗಡ, ಈ ಮೊದಲಾದವುಗಳೇ. ಮತ್ತು ಮಲಂಗಡ, ಕರನಾಳಾ ಎಂಬ ಕೋಟೆಗಳು. ಇವು ಬೊಂಬಾಯಿಯ ಎದುರಿಗೆ ಇವೆ.

ನೆಲ ಕೋಟೆಗಳ ಹೆಸರುಗಳು ಯಾವ್ಯಾವವಂದರೆ, ಬೊಂಬಾಯಿ, ಠಾಣೇ, ಚಾಕಣ, ಅಹಮ್ಮದನಗರ, ಮಾಲೆಗಾಂವ, ಸೋಲ್ಲಾಪುರ, ಮಿರಜೆ, ಅಕಲಕೋಟೆ, ಬೆಳಗಾಂವ, ತೊರಗಲ್ಲು, ರಾಮದುರ್ಗ, ಬಾದಾಂವಿ, ನರಗುಂದ, ಡಂಬಳ, ಗೋಕಾವಿ, ಅಥಣಿ, ಬಂಕಾಪುರ, ಈ ಮುಂತಾದ ಕೋಟೆಗಳು ಇವೆ.

೨೩. ಸಹ್ಯಾದ್ರಿ ಪರ್ವತದ ಪ್ರಸಿದ್ಧಯಾದ ಘಟ್ಟಗಳು ಯಾವ್ಯಾವವು?

ತಳೆಯಾ ಘಟ್ಟ; ಇದು ನಾಶಿಕದ ಕಡೆ ಇಧೆ. ಮಾಳಶಿರಸ ಘಟ್ಟ; ಇದು ಜುನ್ನರದ ಹತ್ತರ ಇಧೆ. ಭೋರ ಘಟ್ಟ; ಇದು ಖಂಡಾಳೆಯ ಬಳಿಯಲ್ಲಿ ಇಧೆ. ಪಾರ ಘಟ್ಟ; ಇದು ಮಹಾ ಬಲೇಶ್ವರದ ಬಳಿಯ ಇಧೆ. ರಾಮ ಘಟ್ಟ; ಇದು ದಕ್ಷಿಣ ಮಹಾರಾಷ್ಟ್ರ ದೇಶದಲ್ಲಿ ಇಧೆ.

೨೪. ಮಹಾರಾಷ್ಟ್ರ ದೇಶದಲ್ಲಿ ರಾಣಿ ಬಹದರವರ ಸರಕಾರಕ್ಕೆ ಬರುವ ಸುವರ್ನಾದಾಯ ಎಷ್ಟು?

ಸುಮಾರು ೧,೦೦,೦೦,೦೦೦ ಒಂದು ಕೋಟಿ ರೂಪಾಯಿ. ಈ ಹಣವು ಭೂಮಿಯ ಕಂದಾಯದಿಂದ ವಸೂಲಾಗುತ್ತದೆ. ಇದು ಹೊರ್ತು, ಜಮಾನುದಾರರಿಗೆ ಅದರಲ್ಲಿ ಒಂದು ಭಾಗ ಹೋಗುತ್ತದೆ. ಇದೂ ಅದೂ ಕೂಡಿ, ಸುಮಾರು ೧,೫೦,೦೦,೦೦೦ ರೂಪಾಯಿ ಮಹಾರಾಷ್ಟ್ರ ದೇಶದಲ್ಲಿ ಹುಟ್ಟುವಳಿ ಆಗುತ್ತದೆ.

೨೫. ಈ ಭೂಮಿಯ ಹುಟ್ಟುವಳಿಯ ಕಂದಾ

ಯುದ ಹಣವು ವಸೂಲಾಗುವದಕ್ಕೆ ರಾಣಿ ಬ
ಹದರವರು ಏನು ತರದೀಫು ಮಾಡಿ ಇದ್ದಾರೆ?

ಪ್ರತಿ ಜಿಲ್ಲೆಗೆ ಒಬ್ಬೊಬ್ಬ ಕಲೆಕ್ಟರನ್ನು ಇಟ್ಟು, ಆತನ ಮುಖಾಂತ್ರ ಸುವರ್ನಾದಾಯ ವಸೂಲೂ, ಮೇಜಸ್ಟ್ರೇಟು ವಿಚಾರಣೆಯು ಸಹ ನುರಗಿಸುತ್ತಾರೆ. ಮತ್ತು ಈ ಜಿಲ್ಲೆಗಳಲ್ಲಿ ಚಿಕ್ಕ ಚಿಕ್ಕ ವಿಭಾಗ ಮಾಡಿ, ಈ ವಿಭಾಗಗಳಿಗೆ ತಾಲ್ಲೋಕು ಎಂತಲೂ, ಪರಗಣೆ ಎಂತಲೂ, ಹೇಳುತ್ತಾರೆ. ಪ್ರತಿ ತಾಲ್ಲೋಕಿಗೆ ನೂರು ಗ್ರಾಮುಗಳು ಕೂಡಿರುತ್ತವೆ. ಪ್ರತಿ ತಾಲ್ಲೋಕಿಗೂ ಒಬ್ಬ ಅಮುಲದಾರನು ಇರುತ್ತಾನೆ. ಜಿಲ್ಲಾದ ಮೇಲೆ ಕಲೆಕ್ಟರಿಗೆ ಎಷ್ಟು ಅಧಿಕಾರ ಉಂಟೋ, ಈ ಅಮುಲದಾರನಿಗೆ ತನ್ನ ತಾಲ್ಲೋಕಿನ ಮೇಲೆ ಅಷ್ಟರ ಅಧಿಕಾರ ಉಂಟು. ಅಮುಲದಾರರು ತಮ್ಮ ತಮ್ಮ ತಾಲೋಕಿನ ವಿದ್ಯಮಾನವನ್ನು ತಮ್ಮ ಜಿಲ್ಲಾ ಕಲೆಕ್ಟರಿಗೆ ತಿಳಿಸುತ್ತಾ ಬರುತ್ತಾರೆ. ಪ್ರತಿ ಒಂದು ಗ್ರಾಮಕ್ಕೆ ಒಬ್ಬೊಬ್ಬ ಗೌಡ ಶ್ಯಾನಭೋಗರು ಇರುತ್ತಾರೆ. ಗೌಡನು ವ

ಸೂಲಾತಿ, ಮೋಜಸ್ತ್ರೇಟು, ಸಾಗುವಳಿ, ಕೆಲಸಗಳನ್ನು ನೋಡುತ್ತಾನೆ. ಶ್ಯಾನಭೋಗನು ಗ್ರಾಮದ ಸಾಗುವಳಿ ವಸೂಲಾತಿ ಲೆಖ್ಖ ಬರೆಯುತ್ತಾನೆ. ಈ ಕೆಲಸಗಳು ನುರಿಗಿಸುವ ಬಗ್ಯೆ ಸರಕಾರದವರು ಇವರಿಗೆ ಸಂಬಳ ಕೊಡುತ್ತಾರೆ. ಮತ್ತು ಯಾವ ಯಾವ ಗ್ರಾಮಗಳಲ್ಲಿ ಸರವಿಯರ್ ಸೂಪ್ರಂಟೆಂಡಂಟರಿಂದ ಭೂಮಿಯು ಅಳೆಯಲ್ಪಟ್ಟು, ಸಿಸ್ತು ನಿಗದಿಯಾಗಿ ಇರುತ್ತದೆಯೋ, ಆಯಾಯ ಗ್ರಾಮಗಳಲ್ಲಿ ಸಿಸ್ತಿನ ಪ್ರಕಾರ ಹಣ ವಸೂಲು ಆಗುತ್ತದೆ. ಯಾವ ಯಾವ ಗ್ರಾಮಗಳಲ್ಲಿ ಸಿಸ್ತು ನಿಗದಿ ಮಾಡಿ ಇಲ್ಲವೋ, ಆಯಾಯ ಗ್ರಾಮಗಳಿಗೆ ಪ್ರತಿ ಸಂವತ್ಸರವು ಅಮಲದಾರರು ಬಂದು, ಜಮಾಬಂದಿ ಮಾಡಿ, ಈ ಸಂವತ್ಸರದ ಜಮಾಬಂದಿ ಇಷ್ಟು ಆಗಿ ಇಧೆ ಎಂದು, ಕಲೆಕ್ಟರಿಗೆ ತಿಳಿಸಿ, ಇದರಲ್ಲಿ ಏನಾದರೂ ತೊಂದರೆ ಇದ್ದರೆ, ಜಿಲ್ಲಾ ಮಜುಕೂರು ಮುಖಾಂತರವೇ ಫಡಛಾ ಮಾಡುತ್ತಾರೆ. ಮತ್ತು ಒಂದೊಂದು ತಾಲ್ಲೋಕಿನಲ್ಲಿ ಒಂ

ದೆರಡು ಪೇಟೆಗಳಿರುತ್ತವೆ. ಈ ಪೇಟೆಗಳಲ್ಲಿ ಪೊಲೀಸು ಬಂದೋಬಸ್ತಿಗೋಸ್ಕರ ಒಬ್ಬೊಬ್ಬ ಮಹಲಕರಿ ಎಂಬ ಅಧಿಕಾರಸ್ತನು ಇರುತ್ತಾನೆ. ಇವನು ಅಮಲದಾರನ ಕೈ ಕೆಳಗಿನವನಾಗಿ ಇದ್ದಾನೆ. ಪ್ರತಿ ಗ್ರಾಮಗಳಲ್ಲಿಯೂ ಮಿರಾಶಿದಾರರೆಂತಲೂ, ಸಾಧಾರಣ ರೈತರೆಂತಲೂ, ಎರಡು ಬಗೆಯುವರು ಉಂಟು. ಮಿರಾಶಿದಾರರು ಆ ಗ್ರಾಮಕ್ಕೆ ಹಕ್ಕದಾರರು ಆಗಿಯೂ, ಇವರಿಗೆ ನಡಿಯುವ ಭೂಮಿ ಇವರ ವಂಶ ಪರಂಪರೆಗೆ ನಡೆಯ ಬೇಕು ಎಂಬ ನಿಬಂಧನೆ ಉಂಟು. ಸಾಧಾರಣ ರೈತರಿಗೆ ಈ ಪ್ರಕಾರ ಇಲ್ಲ. ಈ ದೇಶದ ರೈತರ ವಶದಲ್ಲಿ ಬಹಳ ಭೂಮಿ ಇಲ್ಲದೆ ಇರುವದರಿಂದ ಬಹಳ ಬಡವರಾಗಿ ಇದ್ದಾರೆ.

೨೬. ಈ ದೇಶದಲ್ಲಿ ಫೌಜದಾರಿ ಅದಾಲತ್ತು ಕೆಲಸಗಳು ಹ್ಯಾಗೆ ಹ್ಯಾಗೆ ನಡಿಸಲ್ಪಡುತ್ತಾ ಇವೆ?

ಫೌಜುದಾರಿ ಅದಾಲತ್ತು ಅಂದರೆ, ಶಿವಿಲ್, ಮೇಜಸ್ಟ್ರೇಟು, ಈ ಕೆಲಸಗಳನ್ನು ನ್ಯಾಯವಾಗಿ ನಡ

ಗಿಸ ತಕ್ಕ ಬಗ್ಯೆ, ಪುಣೆ, ಅಹಮ್ಮದ ನಗರ, ಧುಳೆ, ಸಾತಾರಿ ಠಾಣೆ, ಧಾರವಾಡ, ತಲಾದಗಿ, ಕಾರವಾಡ ಈ ಜಿಲ್ಲೆಗಳಲ್ಲಿ ನ್ಯಾಯಾಧಿಪತಿಗಳನ್ನು ಇಟ್ಟು ಇದ್ದಾರೆ. ಇವರಿಗೆ ಜಡ್ಜಿಗಳೆಂಬ ಹೆಸರು. ಮತ್ತು ಪ್ರತಿ ಜಿಲ್ಲೆಯ ಮುಖ್ಯ ಮುಖ್ಯವಾದ ಊರುಗಳಲ್ಲಿ ಪ್ರಿನ್ಸಿಪಾಲ್ ಸದರ ಅಮೀನರೆಂತಲೂ, ಮುನಸಿಫರೆಂತಲೂ, ನೇಮಿಸಲ್ಪಟ್ಟಿದ್ದಾರೆ. ಇವರು ಮೇಲಣ ಜಡ್ಜಿಗಳ ಕೆಳಗಿದ್ದಾರೆ. ಇವರು ತಮ್ಮ ಅಧಿಕಾರದ ಕೆಳಗೆ ಇರುವ ಶೀಮೆಯ ಶಿವಿಲ್ ವಿಚಾರಣೆಯನ್ನು ಸರಕಾರದ ಖಾಯದೆ ಮೇರಿಗೆ ಮಾಡಿ, ವಾದಿ ಪ್ರತಿವಾದಿಗಳಿಗೆ ತೀರ್ಪು ಕೊಡುತ್ತಾರೆ. ಈ ತೀರ್ಪಿನಲ್ಲಿ ವಾದಿಯಾಗಲಿ ಪ್ರತಿವಾದಿಯಾಗಲಿ ಸಮ್ಮತ ಪಡದ ಪಕ್ಷಕ್ಕೆ ಜಿಲ್ಲಾ ಜಡ್ಜಿಯ ಕೋರ್ಟಿಗೆ ಅಪೀಲು ಮಾಡಿ ಕೊಳ್ಳ ಬಹುದು. ಮೇಜಸ್ಟ್ರೇಟು ವಿಷಯದಲ್ಲಿ ಕಲೆಕ್ಟರ ತೀರ್ಪಿನ ಮೇಲೆ ಜಿಲ್ಲಾ ಜಡ್ಜಿ ಕೋರ್ಟಿಗೆ ಅಪೀಲು ಮಾಡಿ ಕೊಳ್ಳ ಬಹುದು. ಮೊದಲನೇ ಜಡ್ಜಿಗೆ ಶೇರಿ ಇರುವ ಜಿಲ್ಲೆ

ಗಳು—ಪುಣೆ ಜಿಲ್ಲಾ, ಸೊಲ್ಲಾಪುರದ ತುಕ್ಕಡಿ, ಎರಡನೆಯವನಿಗೆ ನಗರದ ಜಿಲ್ಲಾ, ನಾಶಿಕ ಸಬ್ಬ ತುಕ್ಕಡಿ. ಮೂರನೆಯವರಿಗೆ, ಠಾಣೆ ಜಿಲ್ಲಾ, ರತ್ನಗಿರಿ ಜಿಲ್ಲಾ. ಅಲ್ಲಿ ಬಾಗ ತುಕ್ಕಡಿ. ಆರನೇ ಯವನಿಗೆ, ಬೆಳಗಾಂವ ಜಿಲ್ಲಾ, ಧಾರವಾಡದ ಜಿಲ್ಲಾ; ಈ ಮೇರಿಗೆ ಶೇರಿ ಇವೆ. ಉಳಿದವರು ತಮ್ಮ ತಮ್ಮ ಜಿಲ್ಲೆಗಳಲ್ಲಿ ಅಧಿಕಾರ ನಡಿಸುತ್ತಾರೆ. ಈ ಜಿಲ್ಲಾ ಕೋರ್ಟುಗಳ ಮೇಲೆ ಹಾಯ ಕೋರ್ಟು ಎಂದು ಬೊಂಬಾಯಿಯಲ್ಲಿ ಇದೆ. ಈ ಕೋರ್ಟಿಗೆ, ಮೇಲಣ ಜಿಲ್ಲಾ ಕೋರ್ಟಿನ ತೀರ್ಪು ಸಮ್ಮತವಿಲ್ಲದ ಪಕ್ಷದಲ್ಲಿ, ಎಸ್ಪಿಶಾಲ್ ಅಪೀಲು ಮಾಡಿ ಕೊಳ್ಳ ಬಹುದು.

೨೭. ಮೇಲೆ ಹೇಳಿದ, ಜಿಲ್ಲೆಗಳಿಗೆ, ಶೇರಿದ ಮುಖ್ಯವಾದ ಊರುಗಳ ಹೆಸರುಗಳು ಯಾವವು?

ಉತ್ತರ ಕೊಂಕಣ ಜಿಲ್ಲಾಕ್ಕೆ ಶೇರಿ ಇರುವ
ದೊಡ್ಡ ದೊಡ್ಡ ಊರುಗಳು.

೧. ದವಣಾನ ಬಂದರ ಎಂಬುವದು ಗೋವೆ ಶೀಮೆಗೆ ಶೇರಿ ಇಧೆ. ೨. ತಾರಾಪುರ. 3. ವಸಯಿ; ಇದರಲ್ಲಿ ಒಂದು ಹಾಳು ಕೋಟೆ ಇದೆ. ೪. ಕಲ್ಯಾಣ. ೫. ಭೀವಡಿ. ೬. ಪನವೇಲಿ. ೭. ಬೇಲಾಪುರ. ೮. ಚೌಲ.

## ದಕ್ಷಿಣ ಕೊಂಕಣ ಜಿಲ್ಲಾಕ್ಕೆ ಶೇರಿ ಇರುವ ದೊಡ್ಡ ದೊಡ್ಡ ಊರುಗಳು.

೧. ನಾಗೋಠಣೆ. ೨. ಬಾಣ ಕೋಟೆ. 3. ಮಹಾಢ. ೪. ಶ್ರೀವರ್ಧನ; ಇದು ಪೇಶ್ವೆಚ ಮೂಲಗ್ರಾಮವು. ೫. ದಾಸಗಾಂವಾ. ೬. ಹರಣಾಯಿ. ೭. ಜೋಗನದಿ; ಇದರಲ್ಲಿ ಇಂಗ್ಲಿಷಿನವರ ಛಾವಣಿ ಇದೆ. ೮. ಅಂಜನವೇಲ. ೯. ರಾಜಪುರ. ೧೦. ವಿಜಯ ದುರ್ಗ. ೧೧. ವೆಂಗುರ್ಲೆ.

## ಅಹಮ್ಮದ ನಗರದ ಜಿಲ್ಲಾಕ್ಕೆ ಶೇರಿ ಇರುವ ದೊಡ್ಡ ದೊಡ್ಡ ಊರುಗಳು.

೧. ನಾಶಿಕ. ೨. ವಿಂಚೂರ. 3. ಏವಲೆ. ೪. ಕರಮಳೆ. ೫. ಸಂಗಮನೇರ. ೬. ಜಮಗಾಂವಾ. ೭. ಬೇಲೆ.

## ಖಾನದೇಶದ ಜಿಲ್ಲಾಕ್ಕೆ ಶೇರಿ ಇರುವ ದೊಡ್ಡ ದೊಡ್ಡ ಊರುಗಳು.

೧. ನಂದುರ ಬಾರ. ೨. ತಾಲನೇರ. ೩. ತನ್ಹೇರ.

## ಪುಣೆ ಜಿಲ್ಲಾಕ್ಕೆ ಶೇರಿ ಇರುವ ದೊಡ್ಡ ದೊಡ್ಡ ಊರುಗಳು.

೧. ಜುನ್ನರ. ೨. ನಾರಾಯಣಗಾಂವಾ. ೩. ಖೇಡ. ೪. ಪಾಬಳ. ೫. ಚಿಂಚವಡ. ೬. ಖಂಡಾಳಿ. ೭. ಕಾರ್ಲೇ. ೮. ವಡಗಾಂವ. ೯. ಪಾಟಸ. ೧೦. ಇಂದಾಪುರ. ೧೧. ಟಿಂಬುರ್ಣೀ. ೧೨. ಸಾಸವಡ. ೧೩ ಜೇಜೂರಿ.

## ಸೊಲ್ಲಾಪುರದ ತುಕ್ಕಡಿಗೆ ಶೇರಿ ಇರುವ ದೊಡ್ಡ ದೊಡ್ಡ ಊರುಗಳು.

೧. ಬ್ರಹ್ಮಪುರಿ. ೨. ಮೋಹಳ. ೩. ಮಹಡೇ. ೪. ಬಾರ್ಶೀ.

## ಸತಾರೆ ಜಿಲ್ಲಾಕ್ಕೆ ಶೇರಿ ಇರುವ ದೊಡ್ಡ ದೊಡ್ಡ ಊರುಗಳು.

೧. ವಾಯಿ. ೨. ಶಿರೋಳ. ೩. ಕೊರೇಗಾಂವ. ೪. ಮಾಹುಲಿ. ೫. ಜಾದಲಿ. ೬. ಗಂಡರಪುರ. ೭. ಕರ್ಹಾಡ. ೮. ತಾಶಿಗಾವಿ.

## ಬೆಳಗಾಂವ ಜಿಲ್ಲಾಕ್ಕೆ ಶೇರಿ ಇರುವ ದೊಡ್ಡ ದೊಡ್ಡ ಊರುಗಳು.

೧. ನಿಪ್ಪಾಣಿ. ೨. ಬೈಲಹೊಂಗಲ. ३. ಸಂವದತ್ತಿ. ೪. ಚಿಕ್ಕೋಡಿ. ೫. ಗೋಕಾಕ.

## ಧಾರವಾಡ ಜಿಲ್ಲಾಕ್ಕೆ ಶೇರಿ ಇರುವ ದೊಡ್ಡ ದೊಡ್ಡ ಊರುಗಳು.

೧. ನರಗುಂದ. ೨. ಲಕ್ಷ್ಮೇಶ್ವರ. ३. ಹಾವೇರಿ. ೪. ಧುಂಡಸಿ. ೫. ಶಿಗ್ಗಾವಿ. ೬. ರಟ್ಟಿಹಳ್ಳಿ. ೭. ಹುಬ್ಬಳ್ಳಿ.

## ಕಲಾದಗಿ ಜಿಲ್ಲೆಯಲ್ಲಿ.

೧. ಬಾದಾಮಿ. ೨ ಬಾಗಲಕೋಟಿ. ३. ವಿಜಾಪುರ. ೪. ಗುಳೆದಗುಡ್ಡ.

## ಕಾನಡ ಜಿಲ್ಲೆಯಲ್ಲಿ.

೧. ಶಿರ್ಶಿ. ೨. ಹೊನ್ನಾವರ. ३. ಕುಮಟಾ. ೪. ಹಲ್ಯಾಳ. ೫. ಸಿದ್ದಾಪುರ.

## ಇದು ಹೊರ್ತು, ಕೊಲ್ಲಾಪುರದ ಶೀಮೆಗೆ ಶೇರಿ ಇರುವ ದೊಡ್ಡ ದೊಡ್ಡ ಊರುಗಳು.

೧. ಮಲಕಾಪುರ. ೨. ಪನಾಳಗಡ. ३ ಬಾವಡೆಗಡ. ೪. ಸಾಮನಗಡ. ೫. ಕಾಗಲ. ೬. ಇಂಚಲಕರಂಜಿ.

### ಮಹಾರಾಷ್ಟ್ರ ದೇಶದಿಂದ ಹೈದರಾಬಾದು ಸಂಸ್ಥಾನಕ್ಕೆ ಶೇರಿ ಇರುವ ದೊಡ ದೊಡ್ಡ ಊರುಗಳು.

೧. ಅಜಂಠೆ. ೨. ಅಸಯಾ. ೩. ಅಂಬರ. ೪. ಜಾಲನಾಪುರ. ೫. ಪುಣತಾಂಬೆ. ೬. ಉಂಬರಾವತಿ. ೭. ಪೈಠಣ. ೮. ನಾಂದೇಡ. ೯. ಬೀಡ. ೧೦. ಹಿಂಗುಲೀ.

೨೮. ದಕ್ಷಿಣ ಮಹಾರಾಷ್ಟ್ರವಾದ ಧಾರವಾಡ ಬೆಳಗಾಂವ ಜಿಲ್ಲೆಗಳಲ್ಲಿ ತಾಲೂಕಿನ ಹೆಸರುಗಳೂ ಕಚೇರಿ ಇರುವ ಊರಿನ ಹೆಸರುಗಳೂ, ಪೇಟೇ ಮನೆಯ ಹೆಸರುಗಳೂ ಏನು?

## ಬೆಳಗಾವ ಜಿಲ್ಲೆ.

| ತಾಲೂಕುಗಳು. | ಕಚೇರಿ ಸ್ಥಳಗಳು. | ಪೇಟೆಗಳು. | ಕಚೇರಿ ಸ್ಥಳಗಳು. |
|---|---|---|---|
| ಬೆಗಗಾವಿ. | ಬೆಳಗಾವಿ. | ಚಂದಗಡ. | ಚಂದಗಡ. |
| ಸಂಪಗಾವಿ. | ಸಂಪಗಾವಿ. | ೦ | ೦ |
| ಖಾನಾಪ್ಪುರ. | ಖಾನಾಪುರ. | ೦ | ೦ |
| ಚಿಕ್ಕೋಡಿ. | ಚಿಕ್ಕೋಡಿ. | ಹುಕ್ಕೇರಿ. | ಹುಕ್ಕೇರಿ. |
| ಪರಸಗಡ. | ಸವದತ್ತಿ. | ಮುರಗೋಡ. | ಮುರಗೋಡ. |
| ಗೊಕಾವಿ. | ಗೊಕಾವಿ. | ೦ | ೦ |
| ಅಥಣಿ. | ಅಥಣಿ. | ೦ | ೦ |

# ಧಾರವಾಡ ಜಿಲ್ಲೆ.

| ತಾಲೂಕುಗಳು. | ಕಚೇರಿ ಸ್ಥಳಗಳು. | ಪೇಟೆಗಳು. | ಕಚೇರಿ ಸ್ಥಳಗಳು. |
|---|---|---|---|
| ಧಾರವಾಡ. | ಧಾರವಾಡ. | ೦ | ೦ |
| ನವಲಗುಂದ. | ನವಲಗುಂದ. | ನರಗುಂದ. | ನರಗುಂದ. |
| ಡಂಬಳ. | ಡಂಬಳ. | ೦ | ೦ |
| ಹುಬ್ಬಳ್ಳಿ. | ಹುಬ್ಬಳ್ಳಿ. | ೦ | ೦ |
| ಬಂಕಾಪುರ. | ಬಂಕಾಪುರ. | ೦ | ೦ |
| ಹಾನಗಲ್ಲು. | ಹಾನಗಲ್ಲು. | ೦ | ೦ |
| ರಾಣೇಬಿನ್ನೂರು. | ರಾಣೇಬಿನ್ನೂರು. | ೦ | ೦ |
| ಕೋಡ. | ಕೋಡ. | ೦ | ೦ |
| ತರ್ಜಿಗಿ. | ತರ್ಜಿಗಿ. | ೦ | ೦ |
| ರೋಣ. | ರೋಣ. | ೦ | ೦ |
| ತಲಗಟ್ಟಿ. | ತಲಗಟ್ಟಿಗಿ. | ೦ | ೦ |

## ತಲಾದಗಿ ಜಿಲ್ಲೆ.

| ತಾಲೂಗಳು. | ಕಚೇರಿ ಸ್ಥಳಗಳು. |
|---|---|
| ಬಾಗಲಕೋಟಿ. | ಬಾಗಲಕೋಟಿ. |
| ಹುನಗುಂದ. | ಹುನಗುಂದ. |
| ಬಾದಾಮಿ. | ಬಾದಾಮಿ. |
| ವಿಜಾಪುರ. | ವಿಜಾಪುರ. |
| ಮುದ್ದೆಬಿಹಾಳ. | ಮುದ್ದೆಬಿಹಾಳ. |
| ಇಂಡಿ. | ಇಂಡಿ. |
| ಸಿಂದಿಗಿ. | ಸಿಂದಿಗಿ. |
| ಬಾಗೇವಾಗಿ. | ಬಾಗೇವಾಡಿ. |

ಈ ಜಿಲ್ಲೆಯಲ್ಲಿ ಮಹಾಲುಗಳು ಇಲ್ಲ.

## ಕಾನಡಾ.

| | | | |
|---|---|---|---|
| ಕಾರವಾಡ. | ಕಾರವಾಡ. | ೦ | ೦ |
| ಕುಮಟಾ. | ಕುಮಟಾ | ಅಂಕೋಲಾ | ಅಂಕೋಲಾ. |
| ಹೊನ್ನಾವರ. | ಹೊನ್ನಾವರ. | ಭಟಕಳ. | ಭಟಕಳ. |
| ಶಿರ್ಶಿ. | ಶಿರ್ಶಿ. | ೦ | ೦ |
| ಸಿದ್ದಾಪುರ. | ಸಿದ್ದಾಪುರ. | ೦ | ೦ |
| ಹಾಲ್ಯಾಳ. | ಹಲ್ಯಾಳ. | ಸುಪಾ. | ಸುಪಾ. |
| ಯಲ್ಲಾಪುರ. | ಯಲ್ಲಾಪುರ. | ಮುಂಡಗೋಡ. | ಮುಂಡಗೋಡ. |

೨೯. ದಕ್ಷಿಣ ಮಹಾರಾಷ್ಟ್ರ ದೇಶದಲ್ಲಿ ನ್ಯಾಯಾಧೀಶರಿರುವ ಕೋರ್ಟುಗಳು ಯಾವ್ಯಾವವು?

೧. ಧಾರವಾಡದ ಪ್ರಿನ್ಸಿಪಾಲ್ ಸದರಮೀನ ಕೋರ್ಟು.

೨. ಹುಬ್ಬಳ್ಳಿಯ ಸದರಮೀನ ಕೋರ್ಟು.

೩. ಬೆಳಗಾಂವ ಸ್ಮಾಲಕಾಜ ಕೋರ್ಟು.

೪. ಬಾಗಡ ಕೋಟೆಯ ಸದರಮೀನ ಕೋರ್ಟು.

೫. ಹಾಂವೇರಿ ಮುನಶೀಫ ಕೋರ್ಟು.

೬. ರೋಣದ ಮುನಶೀಫ ಕೋರ್ಟು.

೭. ಸಂವದತ್ತಿಯ ಮುನಶೀಫ ಕೋರ್ಟು.

೮. ಚಿಕ್ಕೋಡಿಯ ಮುನಶೀಫ ಕೋರ್ಟು.

೯. ಬೆಳಗಾವ ಮುನಶೀಫ ಕೋರ್ಟು.

೧೦. ಹುನಗುಂದ ಮುನಶೀಫ ಕೋರ್ಟು.



## ಎರಡನೇ ಭಾಗವು.

---

### ಮಹಾರಾಷ್ಟ್ರ ದೇಶದ ಪೂರ್ವದ ಇತಿಹಾಸದ ಸಂಗತಿಯನ್ನು ಕುರಿತು.

೧. ಮಹಾರಾಷ್ಟ್ರ ದೇಶದಲ್ಲಿ ಹಿಂದಕ್ಕೆ ಪ್ರಸಿದ್ಧಿಯಾಗಿ ಇದ್ದ ಅರಸನು ಯಾರು?

ಶಾಲಿವಾಹನನು. ಇವನ ರಾಜಧಾನಿಯು ಪ್ರತಿಷ್ಠಾನ ಪಟ್ಟಣವು ಇತ್ತು. ಅದು ಈಗ ಪೈಠಣವೆಂದು ಕರೆಯಲ್ಪಡುತ್ತದೆ. ಮತ್ತು ಈ ಶಾಲಿವಾಹನನು ಶಕ ಪುರುಷನಾಗಿ ಇದ್ದನು. ಈತನ ಶಕವು ಈಸ್ವಿ ಎನ್ನು ಅಂದರೆ ಕ್ರಿಸ್ತ ಶಕದ ೭೮ ವರುಷಗಳ ತರುವಾಯ ನಡಿಯುವದಕ್ಕೆ ಮೊದಲಾಯಿತು. ಈ ಶಕಕ್ಕೆ ಶಾಲಿವಾಹನ ಶಕವೆಂದು ಹೇಳುತ್ತಾರೆ. ಮತ್ತು ಸಂಕಲ್ಪಗಳಲ್ಲಿಯೂ ಕಚೇರಿ ಲೆಖ್ಖ ಪತ್ರಗಳಲ್ಲಿಯೂ ಇದೇ ಶಕವನ್ನೇ ಅನುಸರಿಸುತ್ತಾರೆ.

೨. ಈ ಶಾಲಿವಾಹನನ ತರುವಾಯ ಮಹಾರಾಷ್ಟ್ರ ದೇಶವನ್ನು ಯಾರು ಆಳಿದರು?

ಶಾಲಿವಾಹನನ ತರುವಾಯು ೧೨೦೦ ವರುಷಗಳ ಪರ್ಯಂತರಕ್ಕು ಮಹಾರಾಷ್ಟ್ರ ದೇಶದಲ್ಲಿ ಯಾದವ ವಂಶದ ಅರಸುಗಳು ರಾಜ್ಯಭಾರ ಮಾಡುತ್ತಿದ್ದರು ಎಂದು, ರಾಯರೇಖೆಯಲ್ಲಿ ಹೇಳಿ ಅದೆ. ಆದರೆ ಇವರ ವಂಶ ಪರಂಪರೆಯು ಪಾಂಕ್ತವಾಗಿ ತಿಳಿಯುವದಿಲ್ಲ.

೩. ಈ ಯಾದವ ವಂಶದ ಅರಸುಗಳನಂತರ, ಮಹಾರಾಷ್ಟ್ರ ದೇಶದ ಅವಸ್ಥೆ ಹ್ಯಾಗೆ ಆಯಿತು?

ಸುಮಾರು ಸನ್ ೧೩೦೦ನೇ ಈಸ್ವಿಯು ಆದ ಮೇಲೆ, ಮುಸಲಮಾನರು ನರ್ಮದಾ ನದಿಯ ದಕ್ಷಿಣ ದಿಕ್ಕಿಗೆ ಬಂದು, ಮೊದಲು ದಾಳಿಯ ಮಾಡಿದರು. ಈ ದಾಳಿಯಲ್ಲಿ ಮುಸಲಮಾನರು ರಾಮದೇವ ರಾವಜಾಧವನೆಂಬ ಅರಸನ್ನ ಹಿಮ್ಮೆಟ್ಟಿಸಿ, ಬಿಟ್ಟು, ಈ ಅರಸಿನ ರಾಜಧಾನಿಯಾದ ದೇವಗಡವನ್ನು ತೆಗೆದು ಕೊಂಡು, ಅದಕ್ಕೆ ದೌಲತ್ತಾಬಾದೆಂದು ಹೆಸರಿಟ್ಟರು. ಕೆಲವು ಕಾಲಗಳ ಮೇಲೆ, ದಿಳ್ಳಿಯ ಪಠಾಣ ರಾಜನ ದಂಡು ಬಂದು, ಎ

ಲ್ಲಾ ದಕ್ಷಿಣ ಹಿಂದೂಸ್ಥಾನವನ್ನು ಕೊಳ್ಳೆ ಇಟ್ಟಿತು.

೪. ಆ ಮೇಲೆ ಆದದ್ದು ಏನು?

ಸುಮಾರು ೧೩೫೦ನೇ ಈಸ್ವಿಯಲ್ಲಿ, ದಿಳ್ಳಿ ಸರಕಾರದ ಜಾಫರಖಾನನೆಂಬ ಒಬ್ಬ ಕಾರಭಾರಿಯು ಬಂದು, ಈ ದಕ್ಷಿಣ ದೇಶದಲ್ಲಿ ಮುಸಲಮಾನರ ಒಂದು ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದನು. ಮೊದಲಿಗೆ ಈ ಜಾಫರಖಾನನು ದಿಳ್ಳಿಯಲ್ಲಿ ಇದ್ದ ಒಬ್ಬ ಬ್ರಾಹ್ಮಣನ ಗುಲಾಮನಾಗಿದ್ದನು. ಇವನು ಮೊದಲಿಗೆ ಬ್ರಾಹ್ಮಣನಿಂದ ತನಗೆ ಆದ ಉಪಕಾರವನ್ನು ಸ್ಮರಣೆಗೆ ತಂದು, ತನ್ನ ಹೆಸರಿಗೆ ಬ್ರಾಹ್ಮಣಿಯೆಂಬ ಪದವಿಯನ್ನು ಕೂಡಿಸಿ ಕೊಂಡನು. ಕೆಲವು ಕಾಲದ ಮೇಲೆ, ಇವನು ತೀರಿ ಹೋದನು. ಆ ಮೇಲೆ ಇವನ ವಂಶದ ಅರಸುಗಳೇ ರಾಜ್ಯವನ್ನು ಆಳ ಹತ್ತಿದರು. ಇವರಿಗೂ ಅದೇ ಹೆಸರು ಬಿದ್ದು, ಚರಿತ್ರೆಗಳಲ್ಲಿ ದಕ್ಷಿಣದೊಳಗಳ ಬ್ರಾಹ್ಮಣೀ ರಾಜ್ಯವೆಂದು, ವರ್ಣಿಸಲ್ಪಟ್ಟು ಇದೆ.

೫. ಈ ರಾಜ್ಯಾಧಿಕಾರವು ಎಷ್ಟರ ವರಿಗೂ ನಡಿಯಿತು?

ಸುಮಾರು ೧೫೦ ವರ್ಷಗಳ ಪರ್ಯಂತರ ನಡಿ ಯಿತು.

೬. ಇವರ ಆಳಿಕೆಯಲ್ಲಿ ರಾಜಧಾನಿ ಯಾವ ದು ಆಗಿತ್ತು?

ಮೊದಲಿಗೆ ಕಲಬುರಿಗೆ; ಆ ಮೇಲೆ ಬೇದರ.

೭. ಈ ಬ್ರಾಹ್ಮಣಿ ಎಂಬವರ ಧೊರೆತನದ ತ ರುವಾಯು, ಈ ದೇಶದಲ್ಲಿ ಏನುವರ್ತಿಸಿತು?

ಸುಮಾರು ಸ್ ೧೫೦೦ನೇ ಈಸ್ವಿಯಲ್ಲಿ ಬ್ರಾಹ್ಮ ಣಿರಾಜ್ಯವು ಮುರಿಯಲ್ಪಟ್ಟು, ಐದು ಬೇರೆ ಬೇರೆ ರಾಜ್ಯಗಳಾದವು. ಇವುಗಳೊಳಗೆ ಮೂರು ಶೀ ಮೆಗಳು ಬಲಿಷ್ಠವಾದವು. ೧. ಕುತುಪಶಾಯಿ ಎಂಬುವದು ಗೋವಲಕೊಂಡ ದೇಶವು. ೨. ಅ ದಲಶಾಯಿ ಎಂಬುವದು ಬಿಜಾಪುರದ ದೇಶವು. ೩. ನಿಜಾಮುಶಾಯಿ ಎಂಬುವದು ಅಹಮ್ಮದ ನಗ ರದ ದೇಶವು.

೮. ಈ ವೇಳೆಯಲ್ಲಿ ಮಹಾರಾಷ್ಟ್ರ ದೇಶಕ್ಕೆ ಸಂಭವಿಸಿದ್ದು ಏನು?

ಈ ಅರಸುಗಳು ರಾಜ್ಯಭಾರ ಮಾಡುತ್ತಿರಲಾಗಿ, ಸರ್ ೧೩೯೮ನೇ ಈಸ್ವಿಯಲ್ಲಿ ಮಹಾರಾಷ್ಟ್ರ ದೇಶದ ಮೇಲೆ ಹೆಬ್ಬರವು ಬಿದ್ದು, ಹನ್ನೆರಡು ವರ್ಷದ ಪರ್ಯಂತರಕ್ಕೂ ಮಳೆಬೀಳಲಿಲ್ಲ ಎಂದು ಪೂರ್ವ ಚರಿತ್ರೆಗಳಲ್ಲಿ ಬರೆಯಲ್ಪಟ್ಟು ಇದೆ. ಈ ಸಮಯದಲ್ಲಿ ಕೊಂಕಣದಲ್ಲಿ ಇದ್ದ ಶಿರಕೇ ಎಂಬ ಒಬ್ಬ ಸರದಾರನು ಮುಸಲಮಾನರ ಮೇಲೆ ಝುಗಳ ಮಾಡ ಸಾಮರ್ಥ್ಯವುಳ್ಳವನಾದನು.

೯. ಮೇಲೆ ಹೇಳಿದ ಬ್ರಾಹ್ಮಣೀರಾಜ್ಯವು ತೀರ ನಷ್ಟ ಹೊಂದುವಾಗ, ಏನಾಯಿತು?

ಬ್ರಾಹ್ಮಣಿರಾಜ್ಯ ನಷ್ಟ ಹೊಂದುತ್ತಿರಲಾಗಿ, ಸರ್ ೧೪೯೭ನೇ ಈಸ್ವಿಯಲ್ಲಿ ಪೋರ್ತುಗಲ್ ದೇಶದ ವಾಸ್ಕೋಡಿಗಾಮ ಎಂಬ ಸರದಾರನು ದಂಡು ಎತ್ತಿ ಕೊಂಡು, ಕಾಲಿಕೋಟ ಬಂದರವನ್ನು ಹೊಕ್ಕು, ಸರ್ ೧೫೧೦ನೇ ಈಸ್ವಿಯಲ್ಲಿ ಗೋವೆ ಷಹರನ್ನು ಕೈ ವಶಾ ಮಾಡಿ ಕೊಂಡನು.

೧೦. ಸರ್ ೧೬೨೮ನೇ ಈಸ್ವಿಯಲ್ಲಿ ಮಹಾರಾಷ್ಟ್ರ ದೇಶದಲ್ಲಿ ನಡದ ಸಂಗತಿ ಏನು?

ಅಹಮ್ಮದ ನಗರಕ್ಕೂ ದಿಳ್ಳಿಗೂ ಕಲಹ ಹುಟ್ಟಿ, ಅಹಮ್ಮದ ನಗರದ ಶೀಮೆಯು ಕೇವಲ ನೆಲ ಹತ್ತಿತು. ಈ ಕಾಲದಲ್ಲಿ ಒಬ್ಬ ಬುದ್ಧಿವಂತ ಪ್ರಧಾನಿ ಮಲಿಕಂಬರನೆಂಬವನಿಂದ ಈ ಶೀಮೆಯು ಆಳಲ್ಪಟ್ಟಿತು. ಈ ಮಲಿಕಂಬರನು ಖಡಕೀ ಪಟ್ಣವನ್ನು ಸ್ಥಾಪಿಸಿದನು. ಆ ಮೇಲೆ ಈ ಪಟ್ಣಕ್ಕೆ ಅವರಂಗಜೇಬ ಬಾದಷಾಹನು ಅವರಂಗಾಬಾದೆಂಬ ಹೆಸರನ್ನು ಇಟ್ಟನು.

ಆಗ ಗೋವಲಕೊಂಡೆ, ಬಿಜಾಪುರ, ಈ ಎರಡು ಶೀಮೆಗಳು ದಿಳ್ಳಿ ಶೀಮೆಯವರ ಉಪದ್ರದಿಂದ ದಿನ ದಿನಕ್ಕೆ ಶಿಥಿಲವಾಗುತ್ತಾ ಬಂದವು. ಸನ್ ೧೬೮೭ನೇ ಈಸ್ವಿಯಲ್ಲಿ ಅವರಂಗಜೇಬ ಬಾದಷಾಹನಿಂದ ಈ ಎರಡು ದೇಶಗಳು ಕೇವಲ ಮುರಿದು ಹೋದವು. ಇದಕ್ಕೆ ಮೊದಲು ೨೦೦ ವರುಷಗಳಿಂದ ಈ ಎರಡು ದೇಶಗಳು ಸ್ವತಂತ್ರದಿಂದ ಆಳಲ್ಪಡುತ್ತಾ ಇದ್ದವು.

---

# ಮೂರನೇ ಭಾಗವು.

---

## ಮೊದಲನೇ ಪ್ರಕರಣವು.

---

### ಸತಾರೆಯ ಅರಸುಗಳ ವಂಶಾವಳಿಯನ್ನೂ ಛತ್ರ್ರಿಯನ್ನೂ ಕುರಿತದ್ದು.

೧. ಮಹಾರಾಷ್ಟ್ರ ರಾಜ್ಯವನ್ನು ಯಾರು ಸ್ಥಾಪಿಸಿದರು?

ಶಿವಾಜೀ. ಇವನು ಸನ್ ೧೬೨೭ನೇ ಈಸ್ವಿಯಲ್ಲಿ ಹುಟ್ಟಿ, ಸನ್ ೧೬೮೦ನೇ ಈಸ್ವಿಯಲ್ಲಿ ತೀರಿಹೋದನು.

೨. ಈ ಶಿವಾಜಿಯ ಪೂರ್ವೀಕರ ವೃತ್ತಾಂತವೇನು?

ಇವನ ಪೂರ್ವೀಕರು ದೌಲತ್ತಾಬಾದಿನ ಬಳಿಯ ವೇರೂಳ ಗ್ರಾಮದ ಗೌಡರಾಗಿದ್ದರು. ಇವರ ಅಡ್ಡ ಹೆಸರು ಭೋಸಲೆ. ಶಿವಾಜಿಯ ಅಜ್ಜ

ಮಲೋಜಿ ಭೋಸಲೆ ಎಂಬವನಿಗೆ ಮೊದಲು ದೊಡ್ಡ ಪದವಿ ಶಿಕ್ಕಿತು. ಹ್ಯಾಗಂದರೆ, ಇವನು ತನ್ನ ಮಗನಾದ ಶಾಹಜಿ ಎಂಬವನಿಗೆ ಅವರಂಗಬಾದಿನ ಪಶ್ಚಿಮ ದಿಕ್ಕಿಗೆ ೩೦ ಹರಿದಾರಿಯಲ್ಲಿರುವ ಶಿಂದಕೇರದ ಜಾಧವರಾಯನೆಂಬ ಬಲಿಷ್ಠ ಸರದಾರನ ಕುಮಾರ್ತೆಯನ್ನು ತಂದು, ಮದಿವೆ ಮಾಡಿದನು. ಈ ಜಾಧವರಾಯನ ವಶದಲ್ಲಿ ನಿಜಾಂಶಾಹಿ ಸರಕಾರದ ಹತ್ತು ಸಾವಿರ ಕುದುರೆ ಸವಾರರ ಸನ್ನಾಹ ಇತ್ತು. ಇದೇ ಸರಕಾರದಿಂದ ಮಲೋಜಿ ರಾಯನಿಗೆ ಪುಣೆ, ಸುಪೇ, ಈ ಎರಡು ಶೀಮೆಯ ಜಹಗೀರೂ,–ಶಿವನೇರಿ, ಚಾಕಣ, ಈ ಎರಡು ಕೋಟೆಗಳೂ–ಇವಕ್ಕೆ ಶೇರಿದ ಶೀಮೆಯ ಅಧಿಕಾರವೂ ಸಹ ಸಿಕ್ಕಿತು.

೩. ಶಾಹಜಿಯ ವರ್ತಮಾನವೇನು?

ಶಾಹಜಿಯು ಅಹಮ್ಮದ ನಗರದ ಶೀಮೆಯು ಕ್ಷೀಣಗತಿ ಹೊಂದುವದನ್ನು ನೋಡಿದಾಗ, ಮೊಗಲರ ಕಡೆಗೆ ಹೋದನು. ಆಗ ದಿಳ್ಳಿಯ ಬಾದಷಾಹನಾಗಿದ್ದ ಶಾಹಾಜಹಾನನೆಂಬವನು ಶಾಹಜಿಗೆ

ಇರುವ ಜಹಗೀರೆಲ್ಲವನ್ನು ಅವನದೇ ಎಂಬದಾಗಿ ಸ್ಥಾಪಿಸಿದನು. ತರುವಾಯ ದಿಳ್ಳಿಯ ಅರಮನೆಯವರು ಮೊದಲು ತಾವು ಶಾಹಜಿಗೆ ಕೊಟ್ಟು ಇದ್ದಂಥ ಇನಾಮುಗಳನ್ನೂ ಹಿಂದಕ್ಕೆ ಕಸುಕೊಂಡದ್ದರಿಂದ ಶಾಹಜಿಯು ಕೇವಲ ನಾಚಿಕೆ ಪಟ್ಟು ಕೊಂಡು, ಅಲ್ಲಿಂದ ಬಂದು, ಬಿಜಾಪುರದ ಬಾದಶಾಹನಾದ ಮುಹಮ್ಮದ್ ಅದೀಲಶಾಹಾ ಎಂಬವನ ಆಶ್ರಯವನ್ನು ದೊರಕಿಸಿ ಕೊಂಡು, ತನ್ನ ಯಾವಜ್ಜೀವವು ಅವನ ಆಶ್ರಯದಲ್ಲಿ ಇದ್ದು ಕೊಂಡು, ತನಗೆ ಮೊದಲು ದೊರತಂಥ ಪುಣೇ, ಸುಪೇ, ಈ ಎರಡು ಶೀಮೆಗಳನ್ನು ಸ್ಥಿರ ಪಡಿಸಿ ಕೊಂಡದ್ದು ಅಲ್ಲದೆ, ಇನ್ನು ಕರ್ನಾಟಕ ದೇಶದಲ್ಲಿ ದೊಡ್ಡ ದೊಡ್ಡ ಶೀಮೆಗಳನ್ನು ತನ್ನ ಸ್ವಾಧೀನ ಮಾಡಿ ಕೊಂಡನು.

೪. ಶಿವಾಜಿರಾಯನು ಎಲ್ಲಿ ಹುಟ್ಟಿದನು?

ಜುನ್ನರ ಬಳಿಯಲ್ಲಿ ಇರುವ ಶಿವನೇರಿ ಎಂಬ ಕೋಟೆಯಲ್ಲಿ ಹುಟ್ಟಿದನು.

೫. ಶಿವಾಜಿರಾಯನು ತನ್ನ ಬಾಲ್ಯದಲ್ಲಿ ಯಾರ ಅಂಕೆಯಲ್ಲಿ ಬೆಳೆದು, ಯಾರಿಂದ ವಿದ್ಯಬುದ್ಧಿಯನ್ನು ಕಲಿತು, ಹ್ಯಾಗೆ ಹ್ಯಾಗೆ ನಡೆದನು?

ಈತನ ತಂದೆಯಾದ ಶಾಹಜಿಯು ಕರ್ನಾಟಕ ದೇಶದಲ್ಲಿ ಇದ್ದಾಗ, ಶಿವಾಜಿರಾಜನು ತನ್ನ ಬಾಲ್ಯದಲ್ಲಿ ಪುಣೆ ಪ್ರಾಂತ್ಯದಲ್ಲಿ ತನ್ನ ತಂದೆಯ ಕಾರಭಾರಿಯಾಗಿ ಇದ್ದ ದಾದೋಜಿ ಕೋಂಡ ದೇವನೆಂಬ ಒಬ್ಬ ಬ್ರಾಹ್ಮಣನ ಶಿಕ್ಷೆಯೊಳಗಿದ್ದು, ವಿದ್ಯಬುದ್ಧಿಯನ್ನು ಕಲಿತನು. ಇವನ ಹತ್ತೊಂಭತ್ತನೇ ವಯಸ್ಸಿಗೆ ಮೊದಲೇ ತೋರಣದ ಕೋಟೆಯನ್ನು ತನ್ನ ಕೈವಶ ಮಾಡಿ ಕೊಂಡನು. ಇವನು ತನ್ನ ಚಿಕ್ಕತನ ಮೊದಲ್ಗೊಂಡು, ತನ್ನ ಸ್ವತಂತ್ರವನ್ನು ನಡಿಸುವದಕ್ಕೆ ಮುಂದೆಗೆಯುತ್ತಾ ಇದ್ದನು. ದಾದೋಜಿಕೊಂಡ ದೇವನು ತೀರಿಹೋದ ಬಳಿಕ, ಆ ದೇಶದ ರಾಜ ಕಾರ್ಯವನ್ನು ತನ್ನ ಸ್ವತಂತ್ರದಿಂದ ನಡಿಸಿದ್ದು ಅಲ್ಲದೆ, ದೇಶದ ಹುಟ್ಟುವಳಿಯನ್ನು ಸಹ ತಾನೇ ತೆಗೆದು ಕೊಂಡನು.

ಅಲ್ಲಿಂದ ಆತನು ಬಿಜಾಪುರದವರ ಪುರಂದವೆಂಬ ಕೋಟೆಯನ್ನೂ ಇನ್ನು ಬೇರೆ ಬೇರೆ ಕೋಟೆಗಳನ್ನೂ ಯುಕ್ತಿಯಿಂದ ಸಾಧಿಸಿ ಕೊಂಡನು.

೬. ಶಿವಾಜಿರಾಜನು ತನ್ನ ಶಕ್ತಿಯಿಂದ ದಂಡನ್ನು ಹ್ಯಾಗೆ ಕಟ್ಟಿದನು?

ಈತನು ತನ್ನಲ್ಲಿದ್ದ ಸ್ವಲ್ಪ ದಂಡನ್ನು ವಿಜಾಪುರ, ದಿಳ್ಳಿ ದೇಶಗಳಲ್ಲಿ ಕೊಳ್ಳೇ ಇಡ ಅಪ್ಪಣೆ ಮಾಡಿ, ಕೊಳ್ಳೇ ಹಣದಿಂದ ಇನ್ನೂ ಹೆಚ್ಚಾಗಿ ದಂಡು ಕಟ್ಟುವದಕ್ಕೆ ಶಕ್ತಿಯುಳ್ಳವನಾದನು.

೭. ಇವನ ಕಾಲ್ದಳದ ಶಿಪಾಯಿಗಳು ಎಂಥವರಾಗಿದ್ದರು?

ಇವನ ಕಾಲ್ದಳದ ಶಿಪಾಯಿಗಳು ಘಟ್ಟದ ಮೇಲ್ಭಾಗದ ಮಾವಳ ಶೀಮೆಯೊಳಗಿನ ಮಾವಳೆಯೆಂಬ ಶೂರ ಜನರಾಗಿದ್ದರು.

೮. ಈತನು ಬಿಜಾಪುರದ ದೇಶದಲ್ಲಿ ಯಾವ ಸುಬೆಯನ್ನು ಯಾವಾಗ ತೆಗೆದು ಕೊಂಡನು?

ಸನ್ ೧೬೪೮ನೇ ಈಸ್ವಿಯಲ್ಲಿ ಕಲ್ಯಾಣದ ಸುಬೆಯನ್ನು ತೆಗೆದು ಕೊಂಡನು.

೯. ಬಿಜಾಪುರದ ಬಾದಷಾಹನು ಶಿವಾಜಿಯ ಮೇಲೆ ದಂಡು ಕಳುಹಿಸಿದಾಗ, ಆದದ್ದು ಏನು?

ಸ್ ೧೬೫೯ನೇ ಈಸ್ವಿಯಲ್ಲಿ ಬಿಜಾಪುರದ ಬಾದಷಾಹನು ಅಫಜುಲಖಾನನೆಂಬ ಸರದಾರನೊಡನೆ ತನ್ನ ವೆಗ್ಗಳವಾದ ದಂಡನ್ನು ಕೂಡಿಟ್ಟು, ಶಿವಾಜಿಯ ಮೇಲೆ ಯುದ್ಧಕ್ಕೆ ಕಳುಹಿಸಿದನು. ಆಗ ಶಿವಾಜಿಯು ತಂತ್ರದಿಂದ ಆ ಸರದಾರನನ್ನು, ಏಕಾಂತವಾಗಿ ಮಾತನಾಡ ಬೇಕೆಂದು, ದಂಡಿನಿಂದ ಬೇರೆ ತೆಗೆದು, ಅವನನ್ನು ಪ್ರತಾಪಗಡದ ಬಳಿಯಲ್ಲಿ ಕೊಂದು ಹಾಕಿ ಬಿಟ್ಟನು.

೧೦. ಶಿವಾಜಿಯು ರಾಜನೆನಿಸಿ ಕೊಂಡು, ತನ್ನ ಹೆಸರಿನ ನಾಣ್ಯಗಳನ್ನು ಮಾಡುವದಕ್ಕೆ ಟೆಂಕಸಾಲೆಯನ್ನು ಇಡಿಸಿದ್ದು ಯಾವಾಗ?

ಸ್ ೧೬೬೪ನೇ ಈಸ್ವಿಯಲ್ಲಿ ಶಿವಾಜಿಯ ತಂದೆಯು ಸತ್ತು ಹೋದನು. ಅದೇ ವರುಷದಲ್ಲಿ ಇವನು ಅರಸನೆನಿಸಿ ಕೊಂಡು, ತನ್ನ ಹೆಸರಿನ ನಾಣ್ಯಗಳನ್ನು ಮಾಡುವದಕ್ಕೆ ಒಂದು ಟೆಂಕಸಾಲೆಯನ್ನು ಇಡಿಸಿದನು.

೧೧. ಶಿವಾಜಿ ರಾಜನು ಪೇಶ್ವೆ ಎಂಬ ಮುಖ್ಯ ಪ್ರಧಾನಿತನವನ್ನು ಯಾರಿಗೆ ಯಾವಾಗ ಕೊಟ್ಟನು?

ಸನ್ ೧೬೪೬ನೇ ಈಸ್ವಿಯಲ್ಲಿ ಶಾಮರಾಜ ಪಂತನೆಂಬ ಒಬ್ಬ ಬ್ರಾಹ್ಮಣನಿಗೆ ಕೊಟ್ಟನು.

೧೨. ಈ ಶಿವಾಜಿ ರಾಜನ ರಾಜಧಾನಿ ಮೊದಲು ಯಾವದಾಗಿತ್ತು? ಈಚಿಗೆ ಯಾವದು ಆಯಿತು?

ಈತನ ಮೊದಲು ಪಟ್ಟದ ಸ್ಥಳವು ರಾಜಗಡ ಎಂಬ ಕೋಟೆಯಾಗಿತ್ತು. ಈಚಿಗೆ ರಾಯಗಡ ಎಂಬ ಕೋಟೆಯಾಯಿತು.

೧೩. ಈತನ ಪ್ರಭುತ್ವದಲ್ಲಿ ಯಾವ ಯಾವ ಗುಡ್ಡದ ಕೋಟೆಗಳು ಕಟ್ಟಿಸಲ್ಪಟ್ಟವು? ಅವುಗಳಲ್ಲಿ ಮುಖ್ಯವಾದವುಗಳ ಹೆಸರೇನು?

ಈತನ ರಾಜ್ಯದಲ್ಲಿ ಅನೇಕ ಗುಡದ ಕೋಟೆಗಳು ಕಟ್ಟಿಸಲ್ಪಟ್ಟವು. ಆದರೆ ಇವುಗಳಲ್ಲಿ ರಾಜಗಡ, ಪ್ರತಾಪಗಡ ಎಂಬ ಎರಡು ದುರ್ಗಗಳು ಪ್ರಸಿದ್ಧಿಯಾದವುಗಳು.

೧೪. ಶಿವಾಜಿ ರಾಜನ ಹೆಚ್ಚುತ್ತಿದ್ದ ಶಕ್ತಿಯು ಮಧ್ಯದಲ್ಲಿ ತಗ್ಗುವದಕ್ಕೆ ಕಾರಣವೇನು?

ಶಿವಾಜಿಯನ್ನು ಜಯಿಸುವದಕ್ಕೆ ವಿಜಾಪುರದವರಿಗೆ ಶಕ್ತಿ ಇಲ್ಲದಿದ್ದಾಗ್ಯೂ, ಇವನು ದಿಳ್ಳಿಯ ಬಾದಷಾಹನ ದೇಶದಲ್ಲಿ ಕೊಳ್ಳೆ ಮಾಡಿದ್ದನು. ಆದ್ದರಿಂದ ಅವರಂಗಜೇಬ ಬಾದಷಾಹನು ಜಯವಂತ ಶಿಂಗನೆಂಬ ಒಬ್ಬ ಶೂರ ಸರದಾರನೊಡನೆ ಕೆಲವು ತನ್ನ ದಂಡನ್ನು ಕೊಟ್ಟು, ಶಿವಾಜಿ ರಾಜನ ಮೇಲೆ ಯುದ್ಧಕ್ಕೆ ಕಳುಹಿಸಿದನು. ಆಗ ಶಿವಾಜಿಯ ಬೆಳೆಯುತ್ತಿದ್ದ ಶಕ್ತಿಯು ತಗ್ಗಿ ಹೋಯಿತು.

೧೫. ಆ ಕಾಲದಲ್ಲಿ ಶಿವಾಜಿಯು ಮಾಡಿದ್ದು ಏನು?

ದಿಳ್ಳಿ ಬಾದಷಾಹನಿಗೆ ಶರಣಾಗತನಾಗಿ, ಆತನ ಚಾಕರನಾಗಿ ಇರುತ್ತೇನೆಂದು, ಆ ಸರದಾರನ ಸಂಗಡ ಒಡಂಬಡಿಕೆ ಮಾಡಿ ಕೊಂಡು, ಸ್ ೧೬೬೬ ನೇ ಈಸ್ವಿಯಲ್ಲಿ ಬಾದಷಾಹನ ಭೇಟಿಗೋಸ್ಕರ

ದಿಳ್ಳಿಗೆ ಹೋದನು. ಆಗ ಬಾದಷಾಹನು ಶಿವಾಜಿ ಕೋರಿದ ಮೇರಿಗೆ ಸನ್ಮಾನ ಮಾಡಲಿಲ್ಲ. ಆದ್ದರಿಂದ ಶಿವಾಜಿಯು ಬಾದಷಾಹನನ್ನು ಹೀನಯಿಸಿ, ಜರಿದು, ಇನ್ನು ತಾನು ಅಲ್ಲಿ ಇದ್ದರೆ, ತನಗೆ ಏನಾದರೂ ಕೇಡು ಸಂಭವಿಸುವದು ಎಂದು ನೆನಸಿ, ಅಲ್ಲಿಂದ ಮೆಲಗೆ ತಪ್ಪಿಸಿ ಕೊಂಡು ಬಂದು, ದಕ್ಷಿಣ ದೇಶದಲ್ಲಿ ಬಿದ್ದನು. ಮತ್ತು ಕೆಲವು ಕಾಲಗಳ ಮೇಲೆ ಅದೇ ದಿಳ್ಳಿ ಬಾದಷಾಹನಿಂದ ಶಿವಾಜಿಗೆ ಅರಸನೆಂಬ ಹೆಸರು ದೊರೆಯಿತು.

೧೬. ಹಿಂದೂಸ್ಥಾನದಲ್ಲಿ ಮಹಾರಾಷ್ಟ್ರರಿಗೆ ಚೌಥಾಯಿ, ಮತ್ತು ಸರದೇಶಮುಖಿ ಎಂಬ ಈ ಎರಡು ಹಕ್ಕುಗಳ ಮೂಲ ಪ್ರಾರಂಭ ಯಾವ ಪ್ರಕಾರ ಹುಟ್ಟಿತು?

ಇದಕ್ಕೆ ಮೊದಲೇ ಶಿವಾಜಿ ರಾಜನು ದಿಳ್ಳಿಯ ಅವರಂಗಜೇಬ ಬಾದಷಾಹನಿಗೆ ಶರಣಾಗತನಾಗಿದ್ದನು. ಆಗ ಅವರಂಗಜೇಬ ಬಾದಷಾಹನಿಗೂ ವಿಜಾಪುರದವರಿಗೂ ಝುಗಳ ನಡದಿತ್ತು. ಆದ್ದರಿಂದ ಇ

ದೇ ಸಮಯವೆಂದು. ಶಿವಾಜಿಯು ದಿಲ್ಲಿಯ ಅವ ರಂಗಜೇಬ ಬಾದಶಾಹನಿಂದ ಅಪ್ಪಣೆಯನ್ನು ಹೊಂದಿ, ವಿಜಾಪುರದ ಶೀಮೆಯ ಚೌಥಾಯಿ ಸರದೇಶಮುಖಿ ಎಂಬ ಎರಡು ಹಕ್ಕುಗಳನ್ನು ತನ್ನ ಸ್ವಾಧೀನ ಮಾಡಿ ಕೊಂಡು, ಪೂರ್ವದ ಸಂಪ್ರದಾಯಾನುಸಾರವಾಗಿ ಆ ಹಕ್ಕುಗಳನ್ನು ನಡಿಸುತ್ತಾ ಬಂದದ್ದು ಅಲ್ಲದೆ, ಸನ್ ೧೬೭೦ನೇ ಈಸ್ವಿಯಲ್ಲಿ ದಿಳ್ಳಿಗೆ ಶೇರಿದ ಖಾನ ದೇಶದ ಸುಬೆಯಲ್ಲಿ ಸಹ ಅವುಗಳನ್ನು ಕೂಡ್ರಿಸಿದನು.

೧೩. ಅನಂತರ ಶಿವಾಜಿ ರಾಜನ ಶೂರಕೃತ್ಯವು ಪ್ರಕಾಶವಾಗುವದಕ್ಕೆ ಅವನು ಮಾಡಿದಂಥಾ ಸಾಹಸವೇನು? ಯಾವಾಗ?

ಸನ್ ೧೬೬೫ನೇ ಈಸ್ವಿಯಲ್ಲಿ ಶಿವಾಜಿ ರಾಜನು ನೀರ ಮೇಲಣ ಮಾರ್ಗದಿಂದ ದಂಡೆತ್ತಿ ಕೊಂಡು ಹೋಗಿ, ಮಲಬಾರ—ಅಂದರೆ ಮಳಯಾಳ—ಪ್ರಾಂತ್ಯದಲ್ಲಿ ಧಾಳಿ ಇಟ್ಟನು. ಅನಂತರ ಸೂರತ ಷಹರನ್ನು ಎರಡಾವರ್ತಿ ಕೊಳ್ಳೆ ಮಾಡಿದನು. ಈ

ನಡುವೆ ಎರಡನೇ ತಡವೆ ತನ್ನ ಸಂಗಡ ೧೫,೦೦೦ ದಂಡನ್ನು ಎತ್ತಿ ಕೊಂಡು ಹೋಗಿ, ಮಹಾ ಸಂಪತ್ತಿನಿಂದ ಯುಕ್ತವಾಗಿದ್ದಂಥ ಹುಬ್ಬಳ್ಳಿಯ ಷಹರನ್ನು ಕೊಳ್ಳೆ ಮಾಡಿದನು. ಇಂಥಾ ಕೊಳ್ಳೆಯೂ ಹಿಂದಕ್ಕೆ ಅವನಿಗೆ ಎಂದಿಗೂ ದೊರಕಲಿಲ್ಲ. ಇದಲ್ಲದೆ ತನ್ನ ತಮ್ಮನಾದ ವೆಂಕಾಜಿಯಿಂದ ತನ್ನ ಪಿತರಾರ್ಜಿತ ಜಹಗೀರಿನ ಭಾಗವನ್ನು ತೆಗೆದು ಕೊಳ್ಳ ಬೇಕೆಂದೂ, ವಿಜಾಪುರದ ಸರಕಾರದ ಶೀಮೆಯನ್ನು ಕೊಳ್ಳೆ ಮಾಡ ಬೇಕೆಂದೂ, ತನ್ನ ಸಂಗಡ ೪೦,೦೦೦ ಕಾಲ್ದಳವನ್ನೂ ೩೦,೦೦ ಸಾವಿರ ಕುದುರೆ ಸವಾರರನ್ನೂ ತೆಗೆದು ಕೊಂಡು ಹೋಗಿ, ಸ೯೧೬೭೭ನೇ ಈಸ್ವಿಯಲ್ಲಿ ತನ್ನ ಯೆರಡು ಮನೋಭೀಷ್ಟಗಳನ್ನು ಸಾಧಿಸಿ ಕೊಂಡು, ಕಡೆಗೆ ಕರ್ನಾಟಕ ದೇಶವನ್ನು ಕೊಳ್ಳೆ ಮಾಡಿದನು.

೧೮. ಈ ಶಿವಾಜಿ ರಾಜನ ಪ್ರಭುತ್ವ ಸ್ಥಾಪನೆಯಲ್ಲಿ ಮುಖ್ಯಕಾರಭಾರಿಗಳಾಗಿ ಇದ್ದವರು ಯಾರು?

ಈತನ ಪ್ರಭುತ್ವ ಸ್ಥಾಪನೆಯ ಆದಿ ಭಾಗದಲ್ಲಿ ಶಾಮರಾಜಪಂತನೆಂಬವನು ಶಿರಃಪ್ರಧಾನಿಯಾಗಿ ನೇಮಿಸಲ್ಪಟ್ಟಿದ್ದನು. ತರುವಾಯ ಕೆಲವು ಕಾರಣಗಳಿಂದ ಇವನ ಉದ್ಯೋಗವನ್ನು ತೆಗೆದು, ಒಬ್ಬ ಶೂರ ಸರದಾರನಾದ ಮೊರೋಪಂತಪಿಂಗಳೆ ಎಂಬವನಿಗೆ ಕೊಡಲ್ಪಟ್ಟಿತು. ಬಹಳ ದಿನದವರೆಗೂ ಪೇಶ್ವೆ ಎಂಬ ಶಿರಃಪ್ರಧಾನಿಯ ಕೆಲಸವು ಇವನಿಂದಲೇ ಜರಿಗಿತು. ಮತ್ತು ಶಿವಾಜಿಗೆ ಬಾಲ್ಯ ಸ್ನೇಹಿತರಾಗಿದ್ದ ಏಸೋಜಿಕಂಕ, ತಾನಾಜಿಮಾಲುಸರೆ, ಬಾಜಿಫಾಸಲುಕರ, ಎಂಬ ಈ ಮೂವರು ಶಿವಾಜಿಗೋಸ್ಕರ ಕೆಲವು ಭಾರಿ ಝುಗಳಗಳನ್ನು ಮಾಡಿ, ಜಯಶಾಲಿಗಳಾಗಿ ಇದ್ದರು. ಮತ್ತು ಪ್ರತಾಪರಾವ ಗುಜರ ಎಂಬವನು ಕುದುರೆ ಸವಾರರಿಗೆ ಮುಖ್ಯಸ್ಥನಾಗಿದ್ದನು. ಇವನು ತೀರಿ ಹೋದ ಮೇಲೆ, ಹಂಬಿರರಾವ ಮೋಹಿತಾ ಎಂಬವನು ಸೇನಾಧಿಪತಿ ಆದನು. ಶಿವಾಜಿ ರಾಜನು ತಾನು ಗೆದ್ದ ಶೀಮೆಗಳ ಸುವನಾ್ಯದಾಯದ ವ

ಸೂಲಿನ ಕೆಲಸವನ್ನು ಆಬಾಜಿಸೋನದೇವನೆಂಬ ವನ ಕಡೆಗೆ ಕೊಟ್ಟು ಇದ್ದನು.

೧೯. ಶಿವಾಜಿ ರಾಜನಿಗೆ ರಾಜ್ಯ ಪಟ್ಟಾಭಿಷೇಕವು ಯಾವಾಗ? ಎಲ್ಲಿ ಆಯಿತು?

ಸ್ ೧೬೭೪ನೇ ಈಸ್ವಿಯಲ್ಲಿ ರಾಯಗಡದಲ್ಲಿ ಆಯಿತು.

೨೦. ಶಿವಾಜಿ ರಾಜನ ಆ ಸ್ಥಾನದಲ್ಲಿ ಎಷ್ಟು ಜನ ಪ್ರಧಾನಿಗಳಾಗಿದ್ದರು? ಅವರ ಉದ್ಯೋಗಗಳ ಹೆಸರು ಏನು?

ಎಂಟು ಜನ ಪ್ರಧಾನಿಗಳು ಇದ್ದರು. ಇವರ ಉದ್ಯೋಗಗಳ ಹೆಸರುಗಳು ಯಾವವಂದರೆ—೧.ಪೆಶ್ವೆ ಇಲ್ಲವೆ ಶಿರಃಪ್ರಧಾನಿ. ೨. ಪಂತ ಅಮಾತ್ಯ. ೩. ಪಂತಸಚಿವ. ೪. ಮಂತ್ರಿ. ೫. ಸೇನಾಪತಿ. ೬. ಸುಮಂತ. ೭. ನ್ಯಾಯಾಧೀಶ. ೮. ಪಂಡಿತ ರಾವ.

೨೧. ಈ ಎಂಟು ಜನ ಪ್ರಧಾನಿಗಳು ನೋಡುತ್ತಿದ್ದ ಕೆಲಸಗಳು ಯಾವವು?

ಪೇಶ್ವೆಗೆ ರಾಜನ ಸಮಸ್ತ ಕಾರಭಾರದ ಕೆಲಸವು. ಪಂತ ಅಮಾತ್ಯನಿಗೆ ಜಮಾಬಂದಿ ಠರಾಯಿಸು

ವ ಕೆಲಸವು, ಬರಾವರ್ದುತನಖೆಯೂ. ಪಂತ ಸ ಚಿವನಿಗೆ ದಫ್ತರದಾರಿ, ಬಾರನಿಶಿ, ಅಂದರೆ ದಫ್ತರದ ಲೆಖ್ಖ ಪತ್ರಗಳ ತನಖೆಯೂ, ದಂಡಿನ ಯುದ್ಧ ಸಾಮಗ್ರಿಯನ್ನು ಒದಗಿಸುವ ಕೆಲಸವು. ಮಂತ್ರಿಗೆ ಮನೆವಾರ್ತೆಯ ಕೆಲಸವೂ, ಭೋಜನ ಶಾಲೆಯ ವಿಚಾರಣೆಯೂ. ಸೇನಾಪತಿಗೆ ದಂಡಿನ ಮೇಲ್ವಿ ಚಾರಣೆಯು. ಸುಮಂತನಿಗೆ ಪರ ಶೀಮೆಗಳಿಗೆ ಒಳಪಟ್ಟ ರಾಜ ಕಾರ್ಯ ನಿರ್ವಾಹವೂ ಅವರ ವಕೀಲರ ಕೂಡೆ ಮಾತನಾಡುವದೂ. ನ್ಯಾಯಾ ಧೀಶನಿಗೆ ವ್ಯವಹಾರ ನ್ಯಾಯ ನಿರ್ಣಯವು; ಪಂಡಿತರಾವನಿಗೆ ಶಾಸ್ತ್ರಾರ್ಥವನ್ನು ತಿಳಿದು, ಇದು ಶಾಸ್ತ್ರೀಯ ಇದು ಅಶಾಸ್ತ್ರಿಯ ಎಂದು ನಿರ್ಣ ಯಿಸುವ ಕೆಲಸವು.

೨೨. ಈ ದೊಡ್ಡ ದೊಡ್ಡ ಉದ್ಯೋಗಸ್ಥರು ಎಲ್ಲಿಂದ ಎಲ್ಲಿಯ ತನಕ ಪ್ರಸಿದ್ಧಿಯಾಗಿ ಇದ್ದರು? ಅವರ ಸಂಗತಿ ಏನು?

ಮೊದಲಿಗೆ ಪ್ರಸಿದ್ಧಿಯಾಗಿದ್ದ ಆಬಾಜಿ ಸೋನ

ದೇಪನ ವಂಶಸ್ಥನಾದ ಒಬ್ಬನು ಸಾತಾರೆಯ ಸಂಸ್ಥಾನದ ಕಡೆತನಕ ಅಲ್ಲಿ ಪಂತ ಅಮಾತ್ಯ ಉದ್ಯೋಗದ ಮೇಲೆ ಇದ್ದನು. ಮೋಹಿತೆ ಹಂಬಿರರಾವನೆಂಬವನ ವಂಶಸ್ಥನಾದ ಒಬ್ಬನು ಕುದುರೆ ಸವಾರರಲ್ಲಿ ಮುಖ್ಯಾಧಿಪತಿಯಾಗಿ ಸತಾರೆಯ ರಾಜ್ಯ ಇರುವ ತನಕ ಇದ್ದನು. ಶಿರಕೆ ಎಂಬವನ ಸಂತಾನವು ಇದು ವರಿಗು ಕೊಂಕಣದಲ್ಲಿ ಇದೆ. ಆದರೆ ಈ ಕಾಲದಲ್ಲಿ ಅವನು ಹೆಸರು ಹೊಂದಿದವನಲ್ಲ. ಮೊದಲು ಬಿಜಾಪುರದ ಸರಕಾರದಲ್ಲಿ ಚಾಕರನಾಗಿ ಇದ್ದ ಮುಧೋಳದ ಘೋರಪಡೆಯವರಿಗೆ ಸರಂಜಾಮಿಗೋಸ್ಕರ ಹಾಕಿ ಕೊಟ್ಟದ್ದ ಶೀಮೆಯು ಇದು ವರಿಗೂ ಅವರ ವಂಶಸ್ಥರಿಗೆ ನಡೆಯುತ್ತದೆ.

೭೩. ಶಿವಾಜಿ ರಾಜ ಯಾವಾಗ ಸತ್ತನು? ಆಗ್ಗೆ ಅವನ ವಯಸ್ಸು ಎಷ್ಟು? ಎಷ್ಟು ಜನ ಹೆಂಡರು ಮಕ್ಕಳಿದ್ದರು?

ಸನ್ ೧೬೮೦ನೇ ಈಸ್ವಿಯಲ್ಲಿ ೫೩ ವರುಷಗಳ ವಯಸುಳ್ಳವನಾಗಿ ಸತ್ತನು.

## ಸಂಭಾಜೀ ರಾಜನ ವರ್ಣನೆ.

ಇಸವಿ ಸನ್ ೧೬೮೦ನೇ ವರ್ಷದಿಂದ ೧೬೮೯ ನೇ ವರ್ಷದ ವರೆಗೆ ಆದ ವರ್ತಮಾನವು.

ಶಿವಾಜಿಯು ಸತ್ತನಂತರ ಅವನ ಗಾದಿಯ ಮೇಲೆ ಯಾರು ಕೂತರು?

೧. ಶಿವಾಜಿಯು ಸತ್ತ ಮೇಲೆ ಅವನ ಹಿರಿಮಗನಾದ ಸಂಭಾಜಿಯು ಪಟ್ಟಕ್ಕೆ ಕೂತನು. ಆಗ ಅವನು ೨೩ ವರ್ಷದವನಿದ್ದನು.

ಅವನು ಯಾವಪ್ರಕಾರದ ಮನುಷ್ಯನಾಗಿದ್ದನು?

೨. ಅವನಲ್ಲಿ ಶೌರ್ಯ ಗುಣವು ಸ್ವಲ್ಪವಿತ್ತು; ಆದರೆ ಅವನು ಬಹಳ ಕ್ರೂರನು, ದುರ್ವ್ಯಸನಿಯೂ ಆಗಿದ್ದನು. ಯೆಷ್ಟೋ ಜನರು ಅವನ ತಮ್ಮನಾದ ರಾಜರಾಮನಿಗೆ ಪಟ್ಟ ಕೊಡಬೇಕೆಂಬ ಉದ್ಯೋಗ ನಡಿಸಿದ್ದರು. ಅವರನ್ನು, ರಾಜರಾಮನ ತಾಯಿಯನ್ನು ಸಂಭಾಜಿಯು ಕೊಲ್ಲಿಸಿದನು.

ಅವನು ರಾಜ್ಯವನ್ನು ಹ್ಯಾಗೆ ಆಳಿದನು?

೩. ತನ್ನ ತಂದೆಯ ಕಾಲದಲ್ಲಿ ಪ್ರಸಿದ್ಧರಾದ ಚ

ತುರ ಪ್ರಧಾನರನ್ನೆಲ್ಲ ಧಿಕ್ಕರಿಸಿ, ಅವನು ಕಲುಷಾ ಯೆಂಬ ಒಬ್ಬ ಕನ್ನೋಜಿ ಬ್ರಾಹ್ಮಣನಿಗೆ ಯೆಲ್ಲ ರಾಜ್ಯಾಧಿಕಾರವನ್ನು ಕೊಟ್ಟನು.

ಅವನ ಕೆಟ್ಟ ನಡತೆಯಿಂದ ಯೇನು ಕೇಡಾ ಯಿತು?

೪. ಅದರಿಂದ ಅವನ ತಂದೆಯ ಕಾಲದಲ್ಲಿದ್ದ ವ್ಯವಸ್ಥೆಯೆಲ್ಲಾ ನಷ್ಟವಾಯಿತು. ಅವನು ಒಂದಾ ನೊಂದು ವೇಳೆ ಸಂಗಮೇಶ್ವರವೆಂಬಲ್ಲಿ ನಿರ್ಭ ಯದಿಂದಿರಲಾಗಿ, ಮೊಗಲರು ಬಂದು ಅವನನ್ನು ಹಿಡಿದು ಶೆರೆಯಿಟ್ಟರು.

ತರುವಾಯ ಯೇನಾಯಿತು?

೫. ಆಗ ದಿಲ್ಲಿಯ ಬಾದಷಹನಾದ ಔರಂಗ ಜೇ ಬನು ದಕ್ಷಿಣ ದೇಶವನ್ನು ಕೈವಶ ಮಾಡಿ ಕೊಳ್ಳು ವದಕ್ಕೋಸ್ಕರ ದೊಡ್ಡ ಸೈನ್ಯದೊಡನೆ ಈ ದೇಶ ಕ್ಕೆ ಬಂದಿದ್ದನು.

ಅವನು ಸಂಭಾಜಿಯನ್ನೂ, ಕಲುಷಾ ಬ್ರಾಹ್ಮಣ ನನ್ನೂ ತುಳಾಪುರವೆಂಬ ಗ್ರಾಮದಲ್ಲಿ ಬಹಳ ಕ್ರೂ ರತನದಿಂದ ಕೊಲ್ಲಿಸಿದನು.

ಸಂಭಾಜಿಯನ್ನು ಯಾವ ವರ್ಷ ಕೊಲ್ಲಿಸಿದನು?

೬. ಅವನು ಸ್ತ ೧೬೮೯ನೇ ವರ್ಷದಲ್ಲಿ ಕೊಲ್ಲಿ ಸಲ್ಪಟ್ಟನು. ಅವನು ೯ ವರ್ಷ ರಾಜ್ಯ ವಾಳಿದನು. ಸ್ತ೧೬೮೦ನೇ ಈಸ್ವಿಯಲ್ಲಿ ೫೩ ವರುಷಗಳ ವಯಸ್ಸುಳ್ಳವನಾಗಿ ಸತ್ತನು.

---

ಸಂಭಾಜಿಯು ಕೊಲ್ಲಲ್ಪಟ್ಟ ತರುವಾಯ ಪ್ರಭುತ್ವವನ್ನು ಮಾಡಿದ ಇವನ ತಮ್ಮನಾದ ರಾಜಾರಾಮನನ್ನು ತಾರಾಬಾಯಿಯನ್ನು ಕುರಿತು.

೧. ಸಂಭಾಜಿಯು ಕೊಲ್ಲಲ್ಪಟ್ಟ ತರುವಾಯ ವರ್ತಮಾನವೇನು?

ಇವನ ಮಗನಾದ ಶಿವಾಜಿಗೆ ಶಾಹುರಾಜನೆಂಬ ಹೆಸರು ಮುಂದೆ ಬಂತು; ಪ್ರಕೃತದಲ್ಲಿ ಮೊಗಲರು ಇವನನ್ನು ಶೆರೆಯಲ್ಲಿ ಇಟ್ಟಿದ್ದ ಕಾರಣ, ಕೆಲವು ಆರೆ ಸರದಾರರು ಕೂಡಿ, ಆಲೋಚಿಸಿ, ಸಂಭಾಜಿ ಯ ಮಲ ತಮ್ಮನಾದ ರಾಜಾರಾಮನ ಕಡೆಯಿಂದ

ಪ್ರಭುತ್ವವು ನುರಗಿಸ ಬೇಕೆಂದು, ಗೊತ್ತು ಮಾಡಿದರು.

೨. ಈ ರಾಜರಾಮನು ಎಷ್ಟು ದಿವಸ ಪ್ರಭುತ್ವವನ್ನು ಮಾಡಿದನು?

ಹನ್ನೊಂದು ವರ್ಷ ಪ್ರಭುತ್ವವನ್ನು ಮಾಡಿ, ಸನ್. ೧೭೦೦ನೇ ಈಸ್ವಿಯಲ್ಲಿ ಸತ್ತು ಹೋದನು.

೩. ಈ ರಾಜಾರಾಮನು ಮಾಡಿದ ವಿಶೇಷವಾದ ಕಾರ್ಯಗಳು ಯಾವವು?

ಇವನು ತನ್ನ ಪ್ರಭುತ್ವದಲ್ಲಿ ಸತಾರೆಯಲ್ಲಿ ತನ್ನ ಪಟ್ಟದ ಗದ್ದಿಗೆಯನ್ನು ಸ್ಥಾಪಿಸಿದನು. ಮತ್ತು ಪ್ರಾಲ್ಹಾದನಿರಾಜಿ ಎಂಬ ಒಬ್ಬ ಬ್ರಾಹ್ಮಣನು ಅರಮನೆಯ ದೊಡ್ಡ ದೊಡ್ಡ ಕಾರ್ಯಗಳನ್ನು ಮಾಡಿದ್ದರಿಂದ, ಇವನಿಗೆ ಪಂತಪ್ರಥಿನಿಧಿ ಎಂಬ ಹೆಸರನ್ನು ಕೊಟ್ಟು, ಎಲ್ಲಾ ಪ್ರಧಾನಿಗಳಿಗೂ ಹೆಚ್ಚಿನದಾದ ಒಂದು ನೂತನ ಪದವಿಯನ್ನು ಏರ್ಪಡಿಸಿ, ಇಟ್ಟನು. ಇದಲ್ಲದೆ ಸೇನಾಪತಿಯಾಗಿದ್ದ ಸಂತಾಜಿ ಘೋರಪಡೆ ಎಂಬವನಿಗೆ ಮರ್ಯಾದೆಗೋಸ್ಕರ

ವಾಗಿ ಜರಿಪಟಕಾ ಎಂಬ ಒಂದು ಹೊಸ ನಿಶಾನಿಯನ್ನು ಮಾಡಿಸಿ, ಕೊಟ್ಟನು. ಮಹಾರಾಷ್ಟ್ರ ಜನರ ನಿಶಾನಿಯು ಹಳದಿ ಬಣ್ಣದ್ದು; ಇದನ್ನು ಭಗವಾಝೆಂಡಾ ಎಂದು ಹೇಳುತ್ತಾ ಇದ್ದರು.

೪. ಇವನ ಪ್ರಭುತ್ವದಲ್ಲಿ ಪ್ರಖ್ಯಾತರಾದ ಸರದಾರರು ಯಾರು?

ಧನಾಜಿ ಜಾಧವರಾವ, ಖಂಡೆರಾವದಾಭಾಡೆ, ಮೊದಲಾದ ಸರದಾರರು ಪ್ರಖ್ಯಾತರಾಗಿದ್ದರು. ಇವರು ಇದ್ದದರ ದೆಶೆಯಿಂದಲೇ ಸಂಭಾಜಿಯ ದಿನದಲ್ಲಿ, ಅತಂತ್ರವಾಗಿದ್ದ ಶೀಮೆಯೆಲ್ಲಾ ತೊಂದರೆ ಇಲ್ಲದೆ, ತಿರಿಗಿ ಮೊದಲಿನಂತೆ ಒಂದುಕಟ್ಟಾಗಿ, ಮಹಾರಾಷ್ಟ್ರ ಜನರ ಬೆಳವಿಗೆ ಕಾರಣವಾಯಿತು.

೫. ರಾಜಾರಾಮನು ಸತ್ತ ತರುವಾಯ, ಆದದ್ದು ಏನು?

ಇವನ ಹಿರಿ ಹೆಂಡತಿ ತಾರಬಾಯಿ ಎಂಬುವಳು ಹತ್ತು ವರುಷ ವಯಸ್ಸುಳ್ಳ ತನ್ನ ಮಗನಾದ ಶಿವಾಜಿಗೆ ಪಟ್ಟಾ ಕಟ್ಟಿ, ತಾನೇ ಪ್ರಭುತ್ವವನ್ನು ಮಾಡುತ್ತಾ ಬಂದಳು.

೬. ಇವರು ಪ್ರಭುತ್ವವನ್ನು ಮಾಡುತ್ತಿರುವಲ್ಲಿ ಮಹಾರಾಷ್ಟ್ರ ದೇಶವನ್ನು ಮುಣಿಗಿಸ ಬೇಕೆಂದು ಪ್ರಯತ್ನ ಪಟ್ಟವನು ಯಾರು?

ಅವರಂಗಜೇಬ ಬಾದಷಾಹನು ಮಹಾರಾಷ್ಟ್ರ ಶೀಮೆಯನ್ನು ಮುಣುಗಿಸ ಬೇಕೆಂದು, ದಕ್ಷಿಣ ದೇಶಕ್ಕೆ ಹೇರಳ ದಂಡನ್ನು ಎತ್ತಿ ಕೊಂಡು ಬಂದು, ಯುದ್ಧ ಮಾಡುತ್ತಿದ್ದನು. ಆದರೆ ಅವನ ಕೋರಿಕೆಯು ನೆರವೇರದೆ, ೧೭೦೭ನೇ ಈಸ್ವಿಯಲ್ಲಿ ಸತ್ತು ಹೋದನು.

## ಶಾಹು ಅರಸನನ್ನು ಕುರಿತು.

೧. ಅವರಂಗಜೇಬನು ಸತ್ತ ಮೇಲಿನ ವರ್ತಮಾನವೇನು?

ಸಂಭಾಜಿಯ ಮಗನಾದ ಶಿವಾಜಿಯು ಶೆರೆಯಿಂದ ಬಿಡಲ್ಪಟ್ಟನು. ಇವನಿಗೆ ಕೆಲವು ಜನ ಆರೆ ಸರದಾರರು ಒತ್ತಾಸೆ ಮಾಡಿ, ಇವನನ್ನು ಸರಕಾರಕ್ಕೆ ಕರೆದು ಕೊಂಡು ಹೋಗಿ, ೧೭೦೮

ನೇ ಈಸ್ವಿಯಲ್ಲಿ ಇವನಿಗೆ ಪಟ್ಟಾ ಕಟ್ಟಿದರು. ಆಗ್ಯೆ ಇವನಿಗೆ ೨೪ ವರ್ಷದ ವಯಸ್ಸು ಆಗಿ ಇತ್ತು. ಆ ಮೇಲೆ ತಾರಾಬಾಯಿಯೂ ಇವಳ ಮಗ ಶಿವಾಜಿಯೂ ಕೆಲವು ದಿನಗಳ ವರಿಗೂ ಮರಳಿ ದೇಶ ಸಂಪಾದಿಸುವದಕ್ಕೆ ಪ್ರಯತ್ನ ಪಟ್ಟರು. ಪಟ್ಟಾಗ್ಯೂ, ಅವರ ಯೋಜನೆ ಕೈ ಕೂಡಿ ಬರಲಿಲ್ಲ. ಆದ್ದರಿಂದ ಅವರಿಬ್ಬರು ಅಲ್ಲಿಂದ ಹೊರಟು, ಕೊಲಾಪುರಕ್ಕೆ ಹೋಗಿ, ಅಲ್ಲಿ ಕೆಲವು ಸಂಸ್ಥಾನಗಳನ್ನು ಬಲಕಾಯಿಸಿ ಕೊಂಡು, ಒಂದು ಸ್ವತಂತ್ರವಾದ ಶೀಮೆಯನ್ನು ಸ್ಥಾಪಿಸಿ ಕೊಂಡರು.

೨. ಶಿವಾಜಿಯ ಹೆಸರು ಬದಲಾಗಿ ಶಾಹೂ ರಾಜು ಎಂದು ಕರೆಯಲ್ಪಡುವದಕ್ಕೆ ಕಾರಣವೇನು?

ಇವನು ಅವರಂಗಜೇಬ ಬಾದಷಾಹನ ಶೆರೆಯಲ್ಲಿ ಇರುವಾಗ್ಯೆ, ಇವನ ತಾತನಾದ ಶಿವಾಜಿ ರಾಜು ದೇಶಗಳನ್ನು ಕೊಳ್ಳೆ ಇಟ್ಟ ಸಂಗತಿಯನ್ನು ಅವರಂಗಜೇಬ ಬಾದಷಾಹನು ನೆನಪಿಗೆ ತಂದು,

ಶಿವಾಜಿಗೆ ಕೊಳ್ಳೆಗಾರನೆಂತಲೂ, ಈ ಶಿವಾಜಿಗೆ ಸಾವನೆಂತಲೂ, ವಿನೋದಕ್ಕೆ ಹೇಳುತ್ತಿದ್ದನು. ಆದ್ದರಿಂದ ಸಾವ ಎಂಬುವದು ರೂಢಿಯಲ್ಲಿ ಶಾಹು ಎಂಬದಾಗಿ ಆಯಿತು.

೩. ಈ ಶಾಹೂ ರಾಜನು ಹದಿನೇಳು ವರುಷ ಶೆರೆಯಲ್ಲಿಡಲ್ಪಟ್ಟಿದ್ದ ಕಾಲದಲ್ಲಿ, ಅವರಂಗ ಜೇಬನ ಅರಮನೆಯಿಂದ ಇವನಿಗೆ ಯಾವ ಯಾವ ಕಾರ್ಯಗಳು ಕೈ ಕೂಡಿ ಬಂದವು?

ಅವರಂಗಜೇಬನ ಮಗಳು, ಬೇಗಮಸಾಹೆಬ ಎಂಬವಳು, ಈ ಶಾಹೂರಾಜನ ಮೇಲೂ ಇವನ ತಾಯಿ ಯೇಸೂಬಾಯಿಯು ಮೇಲೂ, ಶಾನೆ ಪ್ರೀತಿ ಇಟ್ಟಳು. ಆ ಕಾರಣದಿಂದ ಅವರಂಗಜೇಬನು ಇವನನ್ನು ಶೆರೆಯಿಂದ ಬಿಡ ಮನಸ್ಸುಳ್ಳವನಾಗಿದ್ದದ್ದು ಅಲ್ಲದೆ, ತನ್ನ ಕೈ ಕೆಳಗೆ ಇದ್ದ ದೊಡ್ಡ ಮನೆತನದ ಸರದಾರರ ಕನ್ಯಗಳನ್ನು ತಂದು, ಇವನಿಗೆ ಮದುವೆ ಮಾಡಿಸಿ, ಕೆಲವು ಶೀಮೆಗಳ ಜಹಗೀರನ್ನು ಹಾಕಿ ಕೊಟ್ಟನು.

೪. ಶಾಹೂ ರಾಜನು ಶೆರೆಯಿಂದ ಬಿಡುಗಡೆಯಾಗಿ, ಮಹಾರಾಷ್ಟ್ರ ದೇಶವನ್ನು ಹೊಕ್ಕಾಗ ಆದ ಸಂಗತಿಯೂ, ಮತ್ತು ಇವನು ಒಂದು ಹುಡಗನಿಗೆ ಅಕ್ಕಲ ಕೋಟೆಯ ರಾಜ ಎನಿಸಿದ ಸಂಗತಿಯೂ ಏನು?

ಇವನು ಶೆರೆಯಿಂದ ಬಿಡುಗಡೆಯನ್ನು ಹೊಂದಿ, ಮಹಾರಾಷ್ಟ್ರ ದೇಶವನ್ನು ಹೊಗಲು, ತಾರಾಬಾಯಿಯ ಕಡೆಯುವರಾದ ಅಲ್ಲಿನ ಜನಗಳು ಈ ಶಾಹೂ ರಾಜನ ಜನಗಳ ಮೇಲೆ ಬಿದ್ದು, ಮುತ್ತಿಗೆ ಹಾಕಿದರು. ಈ ಗದ್ದಲದ ಸಮಯದಲ್ಲಿ ಯಾವಳೋ ಒಬ್ಬ ಹೆಂಗಸು ತನ್ನ ಮಗುವನ್ನು ತಂದು, ಈ ಶಾಹೂರಾಜನ ಪಾದಗಳ ಮೇಲೆ ಅಡ್ಡ ಕೆಡವಿದಳು. ಆಗ ಅವನು ಆ ಮಗುವನ್ನು ತನ್ನ ಸಮೀಪದಲ್ಲಿಯೇ ಇಟ್ಟು ಕೊಂಡು, ಸಾಕಿದನು. ಮುಂದೆ ಇದೇ ಹುಡುಗನೇ ಅಕ್ಕಲ ಕೋಟೆಯ ಅರಸನಾದನು.

೫. ಈ ಶಾಹೂ ರಾಜನ ಗುಣ ಎಂಥಾದ್ದು?

ಕ್ರೀಡಾಸಕ್ತಿಯುಳ್ಳಂಥಾದ್ದು. ಆದದರಿಂದ ಇವನು ತನ್ನ ಸರ್ವ ದೇಶದ ಆಡಳಿತೆಯನ್ನು ಪ್ರಧಾನಿಗೆ ಒಪ್ಪಿಸಿ ಬಿಟ್ಟು, ಸರ್ವ ಆಡಳಿತವು ಪ್ರಧಾನಿಯ ಮುಖಾಂತರವೇ ನುರುಗುತ್ತಾ ಇತ್ತು.

೬. ಮುಟ್ಟಮೊದಲು ಶಾಹೂ ರಾಜನು ಹ್ಯಾಗೆ ಪ್ರಭುತ್ವವನ್ನು ಮಾಡ ಹೊಕ್ಕನು? ಆಗ್ಯೆ ಮಹಾರಾಷ್ಟ್ರ ದೇಶದ ಸ್ಥಿತಿ ಹ್ಯಾಗಿತ್ತು? ಆ ಮೇಲೆ ಯಾವನು ಶಿರಃ ಪ್ರಧಾನಿಯಾದನು?

ಆಗ್ಯೆ ಮಹಾರಾಷ್ಟ್ರ ದೇಶದಲ್ಲಿ ಶಾನೆ ತೊಂದರೆ ಇದ್ದದ್ದು ಅಲ್ಲದೆ, ಕಂದಾಯದ ಹಣದ ವಸೂಲಾತಿಯಲ್ಲಿ ಯಾವದೊಂದು ಕ್ರಮವು ಇರಲಿಲ್ಲ. ಈ ಕಂದಾಯದ ವಸೂಲಾತಿ ವಿಚಾರಣೆಯು ಸೇನಾಧಿಪತಿಯಾದ ಧನಾಜೀ ಜಾಧವ ರಾಯನ ಮುಖಾಂತ್ರ ಜರುಗುತ್ತಾ ಇತ್ತು. ಇವನು ಈ ಕೆಲಸವನ್ನು ನುರುಗಿಸುವದಕ್ಕೆ ತನ್ನ ಕೈಕೆಳಗೆ ಆಬಾಜಿ ಪುರಂದರ, ಬಾಳಾಜಿ ವಿಶ್ವನಾಥ ಎಂಬ ಇಬ್ಬರು ಗುಮಾಸ್ತೆಯರನ್ನು ಇಟ್ಟು ಕೊಂಡು ಇದ್ದನು. ಇವ

ರಿಬ್ಬರಲ್ಲಿ ಬಾಳಾಜಿ ವಿಶ್ವನಾಥ ತರುವಾಯ ಪೇಸ್ವಾಯಿಯ ಅಧಿಕಾರವನ್ನು ತನ್ನ ವಂಶಕ್ಕೆ ಮಾಡಿಸಿ ಕೊಂಡನು. ಶಾಹೂ ರಾಜನು ಪ್ರಭುತ್ವ ಮಾಡ ಹೊಕ್ಕ ಕೆಲವು ದಿವಸಗಳ ಮೇಲೆ, ಶಿರಃ ಪ್ರಧಾನಿಯಾದ ಧನಾಜಿ ಜಾಧವ ರಾಯನು ತೀರಿ ಹೋದನು. ಆನಂತರ ಬಾಳಾಜಿ ವಿಶ್ವನಾಥನು ಶಿರಃ ಪ್ರಧಾನಿಯಾದನು.

೩. ಅವನು ಯಾವಾಗ ಪೇಶ್ವಾ ಆದನು?

ಸ್ಅ೧೭೧೪ನೇ ಈಸ್ವಿಯಲ್ಲಿ ಇದಕ್ಕೆ ಮೊದಲು, ಈ ವುದ್ಯೋಗವು ಭಯಿರು ಪಂತ ಪಿಂಗಳೆ ಎಂಬವನ ವಂಶದ ಬಹಿರೋ ಪಂತನೆಂಬವನಿಗೆ ಇತ್ತು. ಇವನಿಂದ ಕಿತ್ತು ಶಾಹೂ ರಾಜನು ಬಾಳಾಜಿ ವಿಶ್ವನಾಥನಿಗೆ ಕೊಟ್ಟನು. ಆ ಬಾಜಿ ಪುರಂದರೆ ಎಂಬವನು ಪೇಶ್ವಾಯಿಯ ಮುತಾಲೀಕನು ಆದನು.

೪. ಈ ಪೇಶ್ವಾಯಿ ಎಂಬ ಉದ್ಯೋಗವನ್ನು ಬಾಳಾಜಿ ವಿಶ್ವನಾಥನು ಹ್ಯಾಗೆ ನಡಿಸಿದನು?

ಇವನು ಪೇಶ್ವಾಯಿಯ ಉದ್ಯೋಗವನ್ನು ನಡಿಸುವದಕ್ಕೆ ಪ್ರವೇಶ ಮಾಡಿದ ದಿವಸ ಮೊದಲ್ಗೊಂಡು ದಿನ ದಿನಕ್ಕೆ ಮಹಾರಾಷ್ಟ್ರದವರ ಶಕ್ತಿಯು ಹೆಚ್ಚುತ್ತಾ ಬಂತು.

೯. ಶಾಹೂ ರಾಜನು ಎಷ್ಟು ದಿನ ಧೊರೆತನ ಮಾಡಿದನು? ಮತ್ತು ಯಾವಾಗ ಸತ್ತನು?

ಈತನು ಶೆರೆಯಿಂದ ಬಿಡಲ್ಪಟ್ಟು ಬಂದ ಮೇಲೆ, ೪೪ ವರುಷ ಧೊರೆತನವನ್ನು ಮಾಡಿ, ಸರ್ ೧೭೪೯ನೇ ಈಸ್ವಿಯಲ್ಲಿ ಸಂತಾನವು ಇಲ್ಲದೆ, ತನ್ನ ೬೬ನೇ ವಯುಸ್ಸಿನಲ್ಲಿ ಸತ್ತು ಹೋದನು.

೧೦. ಈ ಶಾಹೂ ರಾಜನು ಸಾಯುವದಕ್ಕೆ ಪೂರ್ವದಲ್ಲಿ ಪೇಶ್ವಾಯುವರಿಗೆ ಯಾವ ಯಾವ ಅಧಿಕಾರವನ್ನು ಮಾಡಿ ಕೊಟ್ಟನು?

ಮರಣಕ್ಕೆ ಮುಂಚೆ ಪೇಶ್ವಾಯುವರಿಗೆ ಒಂದು ಶಾಸನವನ್ನು ಬರೆದು ಕೊಟ್ಟನು. ಅದರ ಸಂಗತಿ ಏನೆಂದರೆ, ನೀವು ಶಿವಾಜಿ ರಾಜನ ವಂಶದ ಸನ್ಮಾನವನ್ನೇ ಕಾದು ಕೊಂಡು ಬಂದು ಇದ್ಧೀರಿ; ಆದ್ದ

ರಿಂದ ತಾರಾ ಬಾಯಿಯು ಮಗನಾದ ರಾಮರಾಜ ನನ್ನು ನೀವು ದತ್ತು ಮಾಡಿ ಕೊಂಡು, ನನ್ನ ತರು ವಾಯು ಅವನಿಗೆ ಪಟ್ಟಾ ಕಟ್ಟಿ, ಶೀಮೆಯು ಎಲ್ಲಾ ಆಡಳಿತವನ್ನು ನೀವೇ ನುರಗಿಸಿ ಕೊಂಡು ಬರ ಬೇಕೆಂದು ಬರೆದಿತ್ತು.

## ರಾಮ ರಾಜ, ಎರಡನೇ ಶಾಹೂ ರಾಜ ಪ್ರತಾಪ ಶಿಂಹ ರಾಜರನ್ನು ಕುರಿತು.

೧. ಶಾಹೂ ರಾಜನು ಸತ್ತ ತರುವಾಯು, ಏನಾ ಯಿತು?

ರಾಮ ರಾಜನಿಗೆ ಪಟ್ಟಾ ಕಟ್ಟಿದರು. ಆದರೆ ಇ ವನಿಗೆ ಸ್ವತಂತ್ರವೂ ಸಂತತಿಯೂ ಇಲ್ಲದೆ, ೧೭೭೭ ನೇ ಈಸ್ವಿಯಲ್ಲಿ ಸತ್ತು ಹೋದನು. ಇವನ ದಿನ ದಲ್ಲಿ ದೇಶದ ಎಲ್ಲಾ ಸ್ವತಂತ್ರ ಪೇಶ್ವಾಯುವಳದಾ ಗಿತ್ತು.

೨. ರಾಮ ರಾಜನು ಸತ್ತ ತರುವಾಯು ಏನಾ ಯಿತು?

ಈ ರಾಮ ರಾಜನು ಪುತ್ರ ಹೀನನಾಗಿ ಸತ್ತ್ರದ್ದರಿಂದ, ಶಿವಾಜಿ ರಾಜನ ಮುತ್ತಾತನ ವಂಶದೊಳಗಿನ ಒಬ್ಬನನ್ನು ಶಾಹೂ ರಾಜನ ಹೆಸರಿನ ಮೇಲೆ ದತ್ತಾಗಿ ತೆಗೆದು ಕೊಂಡು, ಪಟ್ಟಾ ಕಟ್ಟಿ, ಎರಡನೇ ಶಾಹೂ ಮಹಾ ರಾಜನೆಂದು ಅವನಿಗೆ ಹೆಸರಿಟ್ಟರು. ಇವನು ಸಹ ಅಸ್ವತಂತ್ರನಾಗಿ ಇದ್ದು, ೧೮೦೮ನೇ ಈಸ್ವಿಯಲ್ಲಿ ಸತ್ತು ಹೋದನು.

೩. ಈ ಎರಡನೇ ಶಾಹೂ ಮಹಾ ರಾಜನು ಸತ್ತ ತರುವಾಯು, ಆದದ್ದು ಏನು?

ಇವನ ಮಗನಾದ ಪ್ರತಾಪ ಸಿಂಹ ರಾಜನು ರಾಜ ಗದ್ದಿಗೆಯ ಮೇಲೆ ಕುಳಿತನು. ಸ್ರ೧೮೧೮ ನೇ ಈಸ್ವಿಯಲ್ಲಿ ಇಂಗ್ಲಿಷಿನವರು ಪೇಶ್ವಾಯುವರ ಸಂಗಡ ಝಗಳ ಮಾಡಿ, ಅವರಿಂದ ಶೀಮೆಯನ್ನು ಕಿತ್ತು, ಶಿವಾಜಿಯ ಶೀಮೆಯೊಳಗಿನ ಕೆಲವು ಸಂಸ್ಥಾನಗಳನ್ನು ಪ್ರತಾಪ ಸಿಂಹ ರಾಜನಿಗೆ ಕೊಟ್ಟರು. ಅದುವರಿಗೂ ಈ ಪ್ರತಾಪ ಸಿಂಹನು ಸತಾರೆಯ ಕೋಟೆಯಲ್ಲಿ ಪೇಶ್ವಾಯುವರಿಂದ ಶೆರೆಯಲ್ಲಿ ಇಡಲ್ಪಟ್ಟು ಇದ್ದನು.

೪. ತರುವಾಯ ಈ ಪ್ರತಾಪ ಸಿಂಹನು ಇಂಗ್ಲಿಷಿನವರಿಗೆ ಏನು ಮಾಡಿದನು? ಅದರಿಂದ ಇವನಿಗೆ ಏನು ಆಯಿತು?

ಸರ್ ೧೮೩೯ನೇ ಈಸ್ವಿಯಲ್ಲಿ, ಈ ಪ್ರತಾಪ ಸಿಂಹನು ಇಂಗ್ಲಿಷಿನವರಿಂದ ಹೊಂದಿದ ಉಪಕಾರ ಸ್ಮರಣೆಯನ್ನು ಮರೆತು, ಇವರ ಮೇಲೆ ದ್ರೋಹ ಚಿಂತನೆ ಮಾಡಿದ್ದರಿಂದ, ಇಂಗ್ಲಿಷಿನವರು ಇವನಿಂದ ಧೊರೆತನವನ್ನು ಕಿತ್ತು, ಇವನ ಕಿರಿ ತಮ್ಮನಾದ ಶಾಹಾಜಿ ಎಂಬುವನಿಗೆ ಸತಾರೆಯ ಧೊರೆತನವನ್ನು ಕೊಟ್ಟರು. ಇವನು ಸಹ ಸರ್ ೧೮೪೮ನೇ ಈಸ್ವಿಯಲ್ಲಿ ಸತ್ತು ಹೋದದ್ದರಿಂದಲೂ, ಈ ರಾಜರ ವಂಶಗಳು ನಿರ್ವಂಶವಾದ್ದರಿಂದಲೂ, ದಿಕ್ಕು ಇಲ್ಲದೆ ಇದ್ದ ಈ ಸಂಸ್ಥಾನವನ್ನು ನೋಡಿ, ಇಂಗ್ಲಿಷಿನವರು ತಮ್ಮ ಸ್ವಾಧೀನ ಮಾಡಿ ಕೊಂಡು, ಇತರ ಜಿಲ್ಲೆಗಳಂತೆ ಈ ದೇಶಕ್ಕೆ ಕಲೆಕ್ಟರು ಮೊದಲಾದ ಉದ್ಯೋಗಸ್ತರನ್ನು ನೇಮಿಸಿ, ಆಳುತ್ತಾರೆ.

---

## ಮೂರನೇ ಭಾಗವು.

### ಎರಡನೇ ಪ್ರಕರಣವು.

ಪೇಶ್ವಾಯವರ ವಂಶಾವಳಿಯನ್ನು ಕುರಿತು.

೧. ಬಾಳಾಜಿ ವಿಶ್ವನಾಥನು ಪೇಶ್ವಾಯ ಕೆಲಸವನ್ನು ಎಷ್ಟು ದಿನ ಮಾಡಿದನು?

ಆರು ಸಂವತ್ಸರಗಳು ಮಾಡಿ, ೧೭೨೦ನೇ ಈಸ್ವಿಯಲ್ಲಿ ಸತ್ತನು.

೨. ಈ ಬಾಳಾಜಿ ವಿಶ್ವನಾಥನು ಪೇಶ್ವಾಯವರ ಕೆಲಸವನ್ನು ನೋಡುವಾಗ, ಮಹಾರಾಷ್ಟ್ರ ದೇಶವನ್ನು ಯಾವ ಯಾವ ರೀತಿಯಲ್ಲಿ ಮುಂದಕ್ಕೆ ತಂದನು?

ಇವನು ಪೇಶ್ವಾಯ ಕೆಲಸವನ್ನು ನೋಡುತ್ತಿರುವಾಗ್ಯೆ, ದಿಲ್ಲಿಯ ಬಾದಷಾಹನು ಕೇವಲ ಪರರ ಕೈವಶನಾಗಿದ್ದನು. ಹ್ಯಾಗಂದರೆ ಆ ದೇಶದಲ್ಲಿ ಸೈಯದು ಎಂಬ ಹೆಸರುಳ್ಳ ಇಬ್ಬರು ಅಣ್ಣ ತಂಮ್ಮಂ

ದಿರು ಕೇವಲ ಪ್ರಖ್ಯಾತರಾಗಿದ್ದರು. ಇವರ ಕೆಲಸವು ಏನಂದರೆ, ತಮ್ಮ ಮನಸ್ಸಿಗೆ ಬಂದಂಥಾ ಬಾದಷಾಹನ ಮನೆತನದಲ್ಲಿ ಒಬ್ಬನನ್ನು ತೆಗೆದು, ಹೆಸರು ಮಾತ್ರಕ್ಕೆ ತಖ್ತಿನ ಮೇಲೆ ಕುಳ್ಳಿರಿಸಿ, ಸರ್ವಾಧಿಕಾರವನ್ನು ತಾವೇ ಸ್ವತಂತ್ರದಿಂದ ಜರುಗಿಸುತ್ತಾ ಇದ್ದರು. ಹೀಗೆ ಇರುವಲ್ಲಿ, ಬಾಳಾಜಿ ವಿಶ್ವನಾಥನು ತನ್ನ ದಂಡನ್ನು ಅವರ ದಂಡಿನಲ್ಲಿ ಶೇರಿಸಿ, ತಾನು ಕೂಡ ದಿಳ್ಳಿಗೆ ಹೋಗಿ, ಅವರ ಆಶ್ರಯವನ್ನು ಸಂಪಾದಿಸಿ ಕೊಂಡು, ಬಾದಷಾಹನ ದೆಶೆಯಿಂದ ತನ್ನ ಧೊರೆಯಾದ ಶಾಹೂ ರಾಜನಿಗೆ ದಕ್ಷಿಣ ದೇಶದೊಳಗಿನ ಸ್ವರಾಜ್ಯ—ಅಂದರೆ, ಶಿವಾಜಿಯ ಅಂತ್ಯ ಕಾಲದಲ್ಲಿ ಇದಂಥಾ ದೇಶವು—ಇನ್ನು ಚೌಥಾಯಿಯನ್ನು ಸರದೇಶ ಮುಖಿಯನ್ನು ಸಹ ಸಂಪಾದಿಸಿ ಕೊಂಡು ಬಂದನು.

೩. ಬಾಳಾಜಿ ವಿಶ್ವನಾಥನು ಯಾವ ಸ್ಥಳದಲ್ಲಿ ಸತ್ತನು?

ಸಾಸವಾಡದಲ್ಲಿ.

೪. ಇವನು ಸತ್ತ ವರುಷದಲ್ಲಿ ನಡೆದ ವರ್ತಮಾನವೇನು?

ಹೈದರಾಬಾದಿನ ನವಾಬು ವಂಶಕ್ಕೆ ಮೂಲ ಪುರುಷನಾದ ನಿಜಾಮುಲ್ಮುಲುಖನೆಂಬುವನು ನರ್ಮದಾ ನದಿಯನ್ನು ತಟಾದು ಬಂದು, ಮೇಲೆ ಹೇಳಿದ ಸೈಯುದರೆಂಬವರ ಕೂಡ ಝಗಳವನ್ನು ಮಾಡ ಪ್ರಾರಂಭಿಸಿದನು. ಈ ನಿಜಾಮುಲ್ಮುಲುಖನ ತರುವಾಯ, ಹೈದರಾಬಾದ್ ಪಟ್ಟಕ್ಕೆ ಯಾವನು ಕುಳಿತಾಗ್ಯೂ, ಅವನನ್ನು ಇಂಗ್ಲಿಷಿನವರು ನಿಜಾಮನೆಂದೂ, ಮಹಾರಾಷ್ಟ್ರದವರು ನವಾಬನೆಂದೂ, ಕರೆಯುತ್ತಾ ಬಂದರು.

೫. ಬಾಳಾಜಿ ವಿಶ್ವನಾಥನಿಗೆ ಎಷ್ಟು ಜನ ಮಕ್ಕಳು ಇದ್ದರು?

ಇಬ್ಬರು ಮಕ್ಕಳು. ಹಿರೀ ಮಗನ ಹೆಸರು ಬಾಜೀರಾಯನು, ಕಿರೀ ಮಗನ ಹೆಸರು ಚಿಮಣಾಜಿಯಪ್ಪ. ಇವರ ತಂದೆ ಸತ್ತ ತರುವಾಯ, ಶಾಹೂ ರಾಜನು ಬಾಜಿ ರಾಯನಿಗೆ ಪೇಶ್ವಾಯ ಉದ್ಯೋಗವನ್ನು ಕೊಟ್ಟನು.

## ಮೊದಲನೇ ಬಾಜೀರಾಯನನ್ನು ಕುರಿತು.

೧. ಈ ಬಾಜೀ ರಾಯನು ಎಂಥಾ ಮನುಷ್ಯನಾಗಿದ್ದನು?

ಇವನು ಶೂರನಾಗಿಯೂ, ಮತ್ತು ಯುದ್ಧ ಮುಂತಾದ ಕೆಲಸಗಳಲ್ಲಿ ಚಾತುರ್ಯವಂತನಾಗಿಯೂ, ಇದ್ದನು.

೨. ಅವನು ಪೇಶ್ವಾಯ ಅಧಿಕಾರವನ್ನು ಎಷ್ಟು ದಿನ ಮಾಡಿದನು?

ಪೇಶ್ವಾಯ ಅಧಿಕಾರವನ್ನು ಹನ್ನೊಂದು ವರ್ಷಗಳ ವರಿಗೂ ಮಾಡಿ, ೧೭೪೦ನೇ ಈಸ್ವಿಯಲ್ಲಿ ತೀರಿ ಹೋದನು. ಇವನು ಜೀವವಂತನಾಗಿರುವಾಗ್ಯೆ, ಶಾಹೂ ಅರಸನು ತನ್ನ ಸಮಸ್ತ ಅಧಿಕಾರವನ್ನು ಇವನಿಗೆ ಒಪ್ಪಿಸಿ ಇದ್ದನು. ಇವನ ತಮ್ಮನಾದ ಚಿಮಣಾಜಿಯಪ್ಪನೆಂಬುವನೂ ಸಹ ಅಣ್ಣನಂತೆಯೇ ಶೂರನೂ ಜಾಣನೂ ಆಗಿದ್ದು, ತನ್ನ ಅಣ್ಣನಿಗೆ ಯುದ್ಧ ಮುಂತಾದ ಕೆಲಸಗಳಲ್ಲಿ ಸಹಾಯಕನಾಗಿದ್ದನು.

೩. ಬಾಜೀರಾಯನು ತನ್ನ ಶೂರತ್ವದಿಂದ ನಡಿಸಿದ ಕಾರ್ಯಗಳು ಯಾವವು?

ಸರ್ ೧೭೩೧ನೇ ಈಸ್ವಿಯಲ್ಲಿ ಬಾಜೀ ರಾಯನಿಗೂ ದಭಾಡೆ ತ್ರಯಂಬಕ ರಾಯನೆಂಬ ಸೇನಾಧಿಪತಿಗೂ ಬಡೋದೆಯ ಬಳಿಯಲ್ಲಿ ದೊಡ್ಡ ಝಗಳ ನಡೆದು, ಬಾಜೀ ರಾಯನಿಂದ ದಭಾಡೆ ತ್ರಯಂಬಕ ರಾಯ ಕೊಲ್ಲಲ್ಪಟ್ಟನು. ಇದಲ್ಲದೆ ಬಾಜೀರಾಯನು ನವಾಬಿನ ಸರಕಾರದ ಸಂಗಡ ಇನ್ನು ಎರಡು ಯುದ್ಧಗಳನ್ನು ಮಾಡಿ, ಅವರ ಸುತ್ತಲೂ ಮುತ್ತಿಗೆ ಹಾಕಿ, ತನ್ನ ಮನೋಭೀಷ್ಟದ ಪ್ರಕಾರ ನವಾಬಿನ ಸರಕಾರದಿಂದ ಒಡಂಬಡಿಕೆಯನ್ನು ಮಾಡಿ ಕೊಂಡು, ತನ್ನ ದಂಡನ್ನು ಎತ್ತಿ ಕೊಂಡು, ಕಪ್ಪವನ್ನು ತೆಗೆದು ಕೊಳ್ಳುವದಕ್ಕೋಸ್ಕರ ಎಲ್ಲಾ ದಕ್ಷಿಣ ದೇಶದಲ್ಲಿ ತಿರುಗುತ್ತಾ ಬಂದನು.

೪. ಬಾಜೀ ರಾಯನು ಮಾಡಿದ ಝಗಳದಿಂದ ಮಹಾರಾಷ್ಟ್ರ ದೇಶಕ್ಕೆ ಆದ ಲಾಭವೇನು?

ನರ್ಮದಾ ನದಿಯ ಆಚೇ ಕಡೆ ಇರುವ ಗು

ಜರಾತಿ ಶೀಮೆಯಲ್ಲೂ, ಮಾಳವಾ ಪ್ರಾಂತ್ಯದಲ್ಲೂ ಸಹ, ಚೌಥಾಯಿಯೂ ಸರ ದೇಶ ಮುಖಿಯೂ ಎಂಬ ಎರಡು ಹಕ್ಕುಗಳು ಮಹಾರಾಷ್ಟ್ರ ದೇಶಕ್ಕೆ ನಡೆಯುವ ಮೇರಿಗೆ ದಿಳ್ಳಿಯ ಬಾದಷಾಹನಿಂದ ಈ ಬಾಜೀ ರಾಯನು ಸಂಪಾದಿಸಿದನು. ಮತ್ತು ಆಗ್ಯೆ ದಕ್ಷಿಣ ದೇಶದಲ್ಲಿ ಆರೆ ಸರದಾರರ ಸಂಗಡ ಝಗಳಗಳನ್ನು ಮಾಡುವದಕ್ಕೆ ನಿಜಾಮುಲ್ಮುಲುಖನು ಒಬ್ಬನೇ ಶಕ್ತಿಯುಳ್ಳವನಾಗಿದ್ದನು. ಇವನು ಸಹ ಕೊನೆಗೆ ಸೋತು, ಮಾಳವಾ ಶೀಮೆಯನ್ನು ಬಿಟ್ಟು ಕೊಟ್ಟನು.

೫. ಹಿಂದೂಸ್ಥಾನದಲ್ಲಿ ಈಗಿರುವ ಸರದಾರರೊಳಗೆ ಬಾಜೀ ರಾಯನ ದಿನದಲ್ಲಿ ಪ್ರಬಲಕ್ಕೆ ಬಂದವರು ಯಾರ್ಯಾರು?

ಬಾಜೀ ರಾಯನ ದಿನದಲ್ಲಿ ಶಿಂದೆ ಎಂಬವನೂ, ಹೋಳಕರ ಎಂಬವನೂ, ಗಾಯಕವಾಡನೆಂಬವನೂ, ಈ ಮೂರು ಮಂದಿ ಸರದಾರರು ಶಾನೆ ಪ್ರಬಲಕ್ಕೆ ಬಂದರು. ಆದರೆ ಈ ಶಿಂದೆ ಎಂಬವನ

ಪೂರ್ವೀಕರು ಮೊದಲಿನಿಂದಲೂ ಸರದಾರರಾಗಿ ಯೇ ಇದ್ದರು. ಮತ್ತು ಇವರ ವಂಶದೊಳಗೆ ಯಾವನೋ ಒಬ್ಬನ ಮಗಳನ್ನು ಅವರಂಗಜೇಬ ಬಾದಷಾಹನು ತಂದು, ಶಾಹು ರಾಜನಿಗೆ ಮದುವೆ ಮಾಡಿಸಿ ಇದ್ದನು. ಇವರ ಪೂರ್ವೀಕರು ಸತಾರೆ ಯ ಹತ್ತರದಲ್ಲಿ ಇರುವ ಕನ್ಹೇರ ಎಂಬ ಗ್ರಾಮದ ಗೌಡರು ಆಗಿದ್ದರು. ಆಗ್ಯೆ ಇವರ ಯೋಗ್ಯತೆಯು ಬಹು ಸ್ವಲ್ಪವಾಗಿತ್ತು. ಇದಕ್ಕೆ ತಾರ್ಕಣ್ಯವೇ ನಂದರೆ, ರಾಣೋಜಿ ಶಿಂದೆ ಬಾಜೀ ರಾಯರ ಹ ತ್ತರ ಹಜೂರು ಊಳಿಗದಲ್ಲಿ ಇದ್ದನು. ಆದರೆ ಪಾ ದರಕ್ಷೆ ಹಿಡಿಯುವ ಚಾಕರಿ. ಮತ್ತು ರಾಮರಾಜ ನ ಪ್ರಭುತ್ವದಲ್ಲಿ ಈಗಿನ ನಾಗಪುರದ ರಾಜನ ಮೂಲ ಪುರುಷನಾದ ಪರಸೋಜಿಭೋಸಲೆ ಎಂಬ ವನು ಬಹು ಹೆಸರುವಾಸಿಯಾಗಿದ್ದನು. ಇದ್ದಾ ಗ್ಯೂ, ಇವನ ವಂಶಸ್ಥನಾದ ರಘೋಜಿಭೋಸಲೆ ಬಾಜೀ ರಾಯರ ಕಾಲದಲ್ಲಿಯೇ ಸೇನಾಸಾಹೇಬ ಸುಭಾ ಎಂಬ ಅಧಿಕಾರವನ್ನು ವಾರ್ಹಾಡದ ಪ್ರಾಂ

ತ್ಯದೊಳಗಿನ ನಾಗಪುರದ ಸಂಸ್ಥಾನವನ್ನು ಸಹ ಸಂಪಾದಿಸಿ ಕೊಂಡನು. ಆದರೆ ಶಾಹೂ ಅರಸನ ಅಡ್ಡ ಹೆಸರೂ ಈ ನಾಗಪುರದವರ ಅಡ್ಡ ಹೆಸರೂ ಒಂದೇ ಪ್ರಕಾರ ಇದ್ದಾಗ್ಯೂ, ಅವರಿಗೂ ಇವರಿಗೂ ಏನೇನು ಸಂಬಂಧವಿಲ್ಲಾ.

೬. ಬಾಜೀ ರಾಯನು ಅಧಿಕಾರವನ್ನು ಮಾಡುತ್ತಿರುವ ಕಾಲದಲ್ಲಿ, ಹಿಂದೂಸ್ಥಾನದಲ್ಲಿ ನಡೆದ ಸಂಗತಿ ಏನು?

ಸರ್ ೧೭೩೯ನೇ ಈಸ್ವಿಯಲ್ಲಿ ಇರಾಣ ದೇಶದ ಬಾದಷಾಹನಾದ ರಷಾಹ ಎಂಬವನು ಹಿಂದೂಸ್ಥಾನದಲ್ಲಿ ಕೊಳ್ಳೆ ಇಡುತ್ತಾ, ದಿಳ್ಳಿ ಪಟ್ಣದ ವರಿಗೂ ಹೋಗಿ, ಆ ಪಟ್ಣದಲ್ಲಿ ಸಾವಿರಾರು ಜನರನ್ನು ಕೊಂದು ಹಾಕಿದನು; ಕೊಳ್ಳೆಯಿಂದ ಅವನಿಗೆ ಶಿಕ್ಕಿದ್ದು ಸುಮಾರು ೩೦ ಕೋಟಿ ರೂಪಾಯಿಗಳು. ಆ ಮೇಲೆ ಆ ದಿಳ್ಳಿಯ ತಖ್ತಿನ ಮೇಲೆ, ಮೊದಲಿನ ಬಾದಷಾಹನನ್ನೇ ಕೂಡ್ರಿಸಿ, ಒಂದು ತಿಂಗಳ ವರಿಗೂ ತಾನು, ತನ್ನ ದಂಡು ಸಹ, ದಿಳ್ಳಿ

ಷಹರಿನಲ್ಲಿ ಇದ್ದು, ತಿರಿಗಿ ಇರ್ರಾಣ ದೇಶಕ್ಕೆ ಹೋದನು.

೭. ಬಾಜೀರಾಯನು ಪೋರ್ತ್ಯುಗಲವರ ಸಂಗಡ ಮಾಡಿದ ಝಗಳದ ಸಂಗತಿ ಏನು?

ಆಗ್ಯೆ ಸಾಷ್ಟಿ ನಡುಗಡ್ಡೆಯು ಪೋರ್ತ್ಯುಗಲವರ ಸ್ವಾಧೀನದಲ್ಲಿ ಇತ್ತು. ಈ ಪೋರ್ತ್ಯುಗಲವರಿಗೂ ಮಹಾರಾಷ್ಟ್ರದವರಿಗೂ ಯುದ್ಧ ನಡೆದು, ಈ ಮಹಾರಾಷ್ಟ್ರದವರು ದೊಡ್ಡ ದಂಡನ್ನು ಎತ್ತಿಕೊಂಡು ಹೋಗಿ, ಅವರ ಮೇಲೆ ಬಿದ್ದು, ಆ ಸಾಷ್ಟಿ ನಡುಗಡ್ಡೆಯನ್ನು ಅವರಿಂದ ಕಿತ್ತುಕೊಂಡರು. ಈ ಝಗಳದಲ್ಲಿ ಮೊದಲಿನ ಚಿಮಣಾಜಿಯಪ್ಪನೆಂಬವನು ಪೋರ್ತ್ಯುಗಲವರ ಸಂಗಡ ಎದೆಕೊಟ್ಟು, ಝಗಳ ಮಾಡಿ, ಜಯಪ್ರದವನ್ನು ಪಡೆದನು. ಆದ್ದರಿಂದ ಆಗ ಅವನ ಹೆಸರು ಬಹಳ ಕೊಂಡಾಡಲ್ಪಟ್ಟಿತು. ಈ ಝಗಳಕ್ಕೆ ಪೂರ್ವವೇ—ಅಂದರೆ, ಸರ್ ೧೬೬೧ನೇ ಈಸ್ವಿಯಲ್ಲಿ ಈ ಪೋರ್ತ್ಯುಗಲವರು ಇಂಗ್ಲಿಷಿನವರಿಗೆ ಬೊಂಬಾಯಿ ನಡುಗಡ್ಡೆಯನ್ನು

ಬಿಟ್ಟು ಕೊಟ್ಟು ಇದ್ದರು. ಆಗ್ಯೆ ಈಗಿನಷ್ಟು ಜನರು ಅಲ್ಲಿ ವಾಸವಾಗಿರಲಿಲ್ಲ.

೮. ಬಾಜೀ ರಾಯನಿಗೆ ಎಷ್ಟು ಜನ ಮಕ್ಕಳು ಇದ್ದರು?

ಮೂರು ಮಂದಿ ಮಕ್ಕಳು ಇದ್ದರು. ಹಿರೀ ಮಗನ ಹೆಸರು ಬಾಳಾಜಿ ಪಂತನು. ಇವನನ್ನು ನಾನಾ ಸಾಹೇಬನೆಂದು, ಜನರು ವಾಡಿಕೆಯಾಗಿ ಕರೆಯುತ್ತಾ ಇದ್ದರು. ಇವನ ತಂದೆಯ ತರುವಾಯ, ಇವನೇ ಪೇಶ್ವಾಯ ಕೆಲಸದ ಮೇಲೆ ಕುಳಿತನು. ನಡುವಿನ ಮಗನ ಹೆಸರು ರಘುನಾಥ ರಾಯನು. ಕಿರಿಯನ ಹೆಸರು ಜನಾರ್ದನ ಪಂತನು. ಇವನು ಯುವ್ವನದಲ್ಲಿಯೇ ತೀರಿ ಹೋದನು.

---

## ನಾನಾ ಸಾಹೇಬ ಎಂದು ಕರಿಸಿ ಕೊಂಡ ಬಾಳಾಜಿ ಬಾಜಿ ರಾಯನನ್ನು ಕುರಿತು.

೧. ಈ ನಾನಾಸಾಹೇಬನು ಪೇಶ್ವಾಯ ಕೆಲಸವನ್ನು ಎಷ್ಟು ದಿವಸ ನೋಡಿದನು?

ಇಪ್ಪತ್ತೊಂದು ವರುಷ. ೧೭೬೧ನೇ ಈಸ್ವಿ ಯಲ್ಲಿ ಸತ್ತು ಹೋದನು.

೨. ಇವನ ಕಾಲದಲ್ಲಿ ಯಾವ ಪಟ್ಟಣವು ಮಹಾರಾಷ್ಟ್ರ ದೇಶದ ರಾಜಧಾನಿ ಆಯಿತು?

ಪುಣೆ ಪಟ್ಟಣ.

೩. ನಾನಾಸಾಹೇಬನು ಪೇಶ್ವಾಯ ಕೆಲಸದ ಮೇಲೆ ಕುಳಿತಾಗ, ಇವನಿಗೆ ಸಂಭವಿಸಿದ ಶತ್ರು ಬಾಧೆ ಏನು? ಆ ಶತ್ರುವಿಗೂ ಇವನಿಗೂ ಆದ ಸಿಂಬಂಧನೆ ಏನು?

ಇವನು ಪೇಶ್ವಾಯ ಕಾರಭಾರವನ್ನು ನಡಿಸುತ್ತಾ ಇರುವ ಕಾಲದಲ್ಲಿ, ನಾಗಪುರ ಸರದಾರನಾದ ರಘೋಜಿ ಭೋಸಲೆ ಎಂಬವನು ಬಹಳ ದಂಡನ್ನು ಕಟ್ಟಿಕೊಂಡು ಬಂದು, ನಾನಾಸಾಹೇಬನ ಸಂಗಡ ದ್ವೇಷವನ್ನು ಬೆಳಿಸ ಮೊದಲಿಟ್ಟನು. ಆಗ ಶಾಹೂ ರಾಜನು ಇವರಿಬ್ಬರಿಗೂ ಮಧ್ಯಸ್ಥ ಮಾಡಿದನು. ಹ್ಯಾಗೆಂದರೆ, ಬಂಗಾಲ, ಬಾಹರ, ಅಯೋಧ್ಯ, ಈ ಮೂರು ಪ್ರದೇಶಗಳಲ್ಲಿ ಇರುವ ಮಹಾ

ರಾಷ್ಟ್ರ ದೇಶದವರ ಹಕ್ಕುಗಳನ್ನು ಪೇಶ್ವೆಯವರು ರಘೋಜಿಗೆ ಬಿಟ್ಟು ಕೊಡ ಬೇಕೆಂತಲೂ, ಮಾಳವ ಪ್ರಾಂತ್ಯವೂ, ಹಿಂದೂಸ್ಥಾನದ ಪಶ್ಚಿಮ ಕಡೆಯ ಪ್ರಾಂತ್ಯವೂ ಅವುಗಳಲ್ಲಿ ಇದ್ದಂಥಾ ಎಲ್ಲಾ ಹಕ್ಕುಗಳೂ, ಪೇಶ್ವೆಯರು ತೆಗೆದು ಕೊಳ್ಳ ಬೇಕು ಎಂಬದಾಗಿ ನಿಬಂಧನೆ ಮಾಡಿ, ಅವರಿಬ್ಬರಿಗೂ ಬಂದಿದ್ದ ದ್ವೇಷವನ್ನು ಬಗೆ ಹರಿಸಿದನು.

೪. ನಾನಾಸಾಹೇಬನ ಕಾಲ ಕೀರ್ತಿಯಲ್ಲಿ ಇವನಿಗೆ ಸಹಾಯಕರು ಯಾರು?

ಈತನ ಕಿರಿ ತಮ್ಮ ರಘುನಾಥ ರಾಯನು ಎಲ್ಲಾ ದಂಡಿನ ವಿಚಾರಣೆಯ ಕೆಲಸವನ್ನು ನೋಡುತ್ತಿದ್ದನು. ಅಲ್ಲದೆ ಈತನ ಚಿಕ್ಕಪ್ಪನ ಮಗ ಸದಾಶಿವ ರಾವ ಭಾವು ಎಂಬವನು ರಾಜ ಕಾರ್ಯವನ್ನು ನುರುಗಿಸುತ್ತಾ ಇದ್ದನು.

೫. ನಾನಾಸಾಹೇಬನು ಕೆಲಸದಲ್ಲಿಯೂ ಗುಣದಲ್ಲಿಯೂ ಎಂಥವನಾಗಿದ್ದನು?

ರಾಜಕೀಯದ ಕೆಲಸದಲ್ಲಿ ಬಹು ಚತುರನೂ,

ಬಹು ಕಪಟಿಯೂ ಸೋವಾರಿಯೂ ದುಂದುಗಾರ ನೂ ಆಗಿದ್ದನು. ಇವನು ಹೀಗೆ ಇದ್ದಾಗ್ಯೂ, ಇವನ ಕಿರೀ ತಮ್ಮನೂ ಚಿಕ್ಕಪ್ಪನ ಮಗನೂ ತಮ್ಮ ಕಾರ್ಯಗಳಲ್ಲಿ ಬಹು ಜಾಗ್ರತೆಯುಳ್ಳವರಾಗಿದ್ದದ ರಿಂದ, ಅವರ ವಂಶದ ಹೆಸರವಾಶಿಗೆ ಹಾನಿ ಬರಲಿಲ್ಲ.

೬. ಭಾವುಸಾಹೇಬನು ದೇಶದ ಬಂದುಕಟ್ಟಿ ಗೋಸ್ಕರ ಯಾವ ಕಾರುಭಾರಿಯನ್ನು ನೇಮಿಸಿ ಇದ್ದನು?

ಶೇಣುವೆ ಕುಲದ ರಾಮ ಚಂದ್ರಬಾಬಾ ಎಂಬ ವನನ್ನು ಕಾರಭಾರಿಯಾಗಿ ಇಟ್ಟು ಇದ್ದನು. ಈ ರಾಮಚಂದ್ರ ಬಾಬನೂ ಸದಾಶಿವ ರಾವಭಾವು ಸಹ ಕೂಡಿ, ಶಿವಾಜಿ ರಾಯನ ಕಾಲದಿಂದ ದೇಶದಲ್ಲಿ ಆಗಿದ್ದಂಥಾ ತೊಂದರೆಯನ್ನು ತಪ್ಪಿಸಿ, ವ್ಯವಸ್ಥೆಯ ಮಾಡಿದರು.

೭. ನಾನಾಸಾಹೇಬನ ವೇಳೆಯಲ್ಲಿ ಮಹಾರಾಷ್ಟ್ರದವರ ಘನವು ಹ್ಯಾಗೆ ಇತ್ತು?

ಹಿಂದೂಸ್ಥಾನದೊಳಗೂ, ಕರ್ನಾಟಕ ದೇಶದೊಳಗೂ, ಶಾನೆ ಬಲಿಷ್ಠರಾಗಿ, ಕೊಳ್ಳೇ ಹೊಡಿಯುತ್ತಾ ಇದ್ದರು. ಇದಲ್ಲದೆ ದಿಳ್ಳಿ ದೇಶದ ಮುಖ್ಯ ಕಾರುಭಾರಿಗಳ ಮನಸ್ಸೂ ಇವರ ಮನಸ್ಸೂ ಒಂದೇ ಆಗಿರುವದರಿಂದ, ದಿಳ್ಳಿಯವರು ಯಾವ ಒಂದು ರಾಜಕೀಯದ ಕೆಲಸ ಮಾಡ ಬೇಕಾದರೂ, ಮಹಾರಾಷ್ಟ್ರ ಜನರ ಸಹಾಯ ಹೊರ್ತು, ನಡೆಯುತ್ತಿರಲಿಲ್ಲ.

೮. ನಾನಾಸಾಹೇಬನು ಪೇಶ್ವಾಯ ಕೆಲಸದ ಮೇಲೆ ಇದ್ದಾಗ, ಹಿಂದೂಸ್ಥಾನಕ್ಕೆ ಬಂದು ಯಾವನು ಕೊಳ್ಳೆ ಇಟ್ಟನು? ಅವನ ಸಂಗತಿ ಏನು?

ಕಾಬೂಲ್, ಪಶ್ಚಿಮ ಇರಾಣ ದೇಶಗಳನ್ನು ಆಳುತ್ತಾ ಇದ್ದ ಆಫ್ಘಾನರ ಧೊರೆಯಾದ ಅಹಮ್ಮದಷಾಹ ಅಬ್ದಾಲಿ ಎಂಬವನು ೧೭೪೮ನೇ ಈಸ್ವಿಯಲ್ಲಿ ಮೊದಲು ಹಿಂದೂಸ್ಥಾನದಲ್ಲಿ ಧಾಳಿ ಇಟ್ಟು, ತರುವಾಯ ಪಂಜಾಬು ಪ್ರಾಂತ್ಯವನ್ನು ತನ್ನ ಕೈವಶ ಮಾಡಿ ಕೊಂಡನು. ಈ ಆಫ್ಘಾನರಿಗೆ ಮಹಾರಾಷ್ಟ್ರದವರು ಗಿಲಿಚೇರು ಎಂದು ಕರೆಯುತ್ತಾರೆ.

೯. ಇದೇ ವರುಷದಲ್ಲಿ ಇನ್ನು ಏನಾಯಿತು?

ಇದೇ ವರುಷದಲ್ಲಿ ಹೈದರಾಬಾದಿನ ನವಾಬನಾದ ನಿಜಾಮುಲ್ಮುಲುಖನು ಸತ್ತು ಹೋದನು. ಸಾಯುವಾಗ ಇವನ ವಯಸ್ಸು ೧೦೪ ವರುಷಗಳು ಆಗಿತ್ತು, ಎಂದು ಹೇಳುತ್ತಾರೆ. ಇವನು ಸತ್ತದ್ದು ಮೊದಲ್ಗೊಂಡು ಹನ್ನೆರಡು ವರುಷಗಳ ವರಿಗೂ ಆ ದೇಶದಲ್ಲಿ ಯಾವ ಗೊತ್ತೂ ಗುರಿಯೂ ಇರಲಿಲ್ಲ. ಆ ಮೇಲೆ, ಇವನ ಮಗನಾದ ನಿಜಾಮ ಅಲ್ಲೀ ಎಂಬವನು ತನ್ನ ತಂದೆಯ ಶೀಮೆಯಲ್ಲಿ ಸರ್ವ ಸ್ವತಂತ್ರವನ್ನು ಹೊಂದಿದನು.

೧೦. ನಾನಾಸಾಹೇಬನ ಕಾಲದಲ್ಲಿ ಮಹಾರಾಷ್ಟ್ರದ ಜನರು ಹಿಂದೂಸ್ಥಾನದಲ್ಲಿ ಎಷ್ಟು ವೇಳೆ ಕೊಳ್ಳೆ ಮಾಡಿದರು?

ಮೂರು ವೇಳೆ ಕೊಳ್ಳೆ ಮಾಡಿದರು. ಇವುಗಳಲ್ಲಿ ಎರಡಾವರ್ತಿ ಅವನ ಸಹೋದರನಾದ ರಘುನಾಥ ರಾಯನಿಂದ ಮಾಡಲ್ಪಟ್ಟಿತು. ಎರಡನೇ ಸಾರಿ ೧೭೫೮ನೇ ಈಸ್ವಿಯಲ್ಲಿ ಪಂಜಾಬಕ್ಕೆ ಹೋಗಿ,

ಆಫ್ಘಾನರ ಕಡೆ ಸುಭೆದಾರನನ್ನು ಕಿತ್ತು ಹಾಕಿ, ಮಹಾರಾಷ್ಟ್ರದ ಕಾರ್ಯ ಭಾರಿಯನ್ನು ಇಟ್ಟನು. ಇಟ್ಟಾಗ್ಯೂ, ಕಂದಾಯದ ಹಣವು ಅವನಿಗೆ ಶಿಕ್ಕಲಿಲ್ಲ. ದಂಡಿನ ವೆಚ್ಚಕ್ಕೆ ಬಹಳ ಹಣ ಹತ್ತಿದ್ದರಿಂದ, ಮಲ್ಹಾರರಾವು ಹೋಳಕರ ಎಂಬವನನ್ನೂ ಶಿಂದೇರ ಕಡೆ ಕೆಲವು ಜನರನ್ನೂ ಸಹಾ ಹಿಂದುಸ್ಥಾನದಲ್ಲಿ ವಸೂಲಿ ಕೆಲಸದ ಮೇಲೆ ಇಟ್ಟನು.

೧೧. ಇದರ ತರುವಾಯು ನಡೆದ ವರ್ತಮಾನವೇನು?

ಮಹಾರಾಷ್ಟ್ರದವರ ಸಂಗಡ ಝುಗಳವನ್ನು ಮಾಡ ಅಹಮ್ಮದುಶಾಹ ಎಂಬ ರಾಜನು ದೊಡ್ಡದಂಡನ್ನು ಎತ್ತಿ ಕೊಂಡು, ಹಿಂದೂಸ್ಥಾನದಲ್ಲಿ ಬಂದನು. ಆಗ ಸದಾಶಿವರಾವಭಾವು ಪೇಶ್ವೇದವರ ಹಿರೀ ಮಗನಾದ ವಿಶ್ವಾಸರಾವು ಸಹ, ಅವನ ಸಂಗಡ ಝುಗಳವನ್ನು ಮಾಡುವ ನಿಮಿತ್ಯ, ಹಿಂದೂಸ್ಥಾನಕ್ಕೆ ಹೋದನು.

೧೨. ಈ ಯುದ್ಧವನ್ನು ಕುರಿತು ಹಿಂದೂಸ್ಥಾ

ನದಲ್ಲಿ ಭಾವೂ ಸಾಹೇಬನು ಎಷ್ಟು ದಂಡನ್ನು ಕೂಡಿಸಿ ಇದ್ದನು?

ಶಿಂದೆ, ಹೋಳಕರ, ಗಾಯಕವಾಡ, ಮುಂತಾದ ಇನ್ನು ಕೆಲವು ಜನ ಸರದಾರರನ್ನೂ ಕರಸಿದನು. ಈ ಎಲ್ಲಾ ದಂಡು ಕೂಡಿ, ೧೫,೦೦೦ ಕಾಲ್ದಳವೂ, ೫೫,೦೦೦ ಕುದುರೆ ಸವಾರರೂ, ೨೦೦ ಫಿರಂಗಿಗಳೂ, ಇದಲ್ಲದೆ ೨,೦೦,೦೦೦ ಗುನುಗೂ ಬಜಾರು ಸಹ ಇತ್ತು. ಈ ಪ್ರಕಾರ ಭಾವೂ ಸಾಹೇಬನು ತನ್ನ ಕೂಡೆ ಎತ್ತಿಕೊಂಡು ಹೋದ ದಂಡಿನ ಮುಸ್ತೈದಿಗಳು, ಅವರಂಗಜೇಬ ಬಾದಷಾಹನ ದಿನ ಮೊದಲ್ಗೊಂಡು ಯಾರೂ ನೋಡದೆ ಇದ್ದಂಥವುಗಳಾಗಿದ್ದವು. ಮತ್ತು ಆಫ್ಘಾನ ಸರದಾರರು ಮಹಾರಾಷ್ಟ್ರ ಸರದಾರರಿಗೆ ಸರಿಯಾಗಿದ್ದಾಗ್ಯೂ, ಆಫ್ಘಾನರ ಕಾಲ್ದಳವು ಮಹಾರಾಷ್ಟ್ರ ಕಾಲ್ದಳಕ್ಕಿಂತ ಹೆಚ್ಚಾಗಿತ್ತು. ಆದರೆ ಮಹಾರಾಷ್ಟ್ರ ಕುದುರೆ ಸವಾರರು ಅವರ ಸವಾರರಿಗಿಂತ ಹೆಚ್ಚಾಗಿದ್ದರು.

೧೩. ಈ ಮಹಾರಾಷ್ಟ್ರದವರು ಮಾಡಿದ ಈ ಮೂರನೇ ಝುಗಳದಲ್ಲಿ ಏನಾಯಿತು?

ಪಾನಪತ ಎಂಬ ಸ್ಥಳದಲ್ಲಿ ಅಫ್ಘಾನರ ಸಂಗಡ ಮಾಡಿದ ಯುದ್ಧದಿಂದ ಮಹಾರಾಷ್ಟ್ರದವರು ಶಾನೆ ಹಾಳಾದರು.

೧೪. ಈ ಯುದ್ಧವು ಆಗುವದಕ್ಕೆ ಪೂರ್ವದಲ್ಲಿ ನಡದ ವರ್ತಮಾನ ಏನು?

ಸನ್ ೧೭೬೦ನೇ ಈಸ್ವೀಯಲ್ಲಿ ಮಹಾರಾಷ್ಟ್ರದವರಿಗೆ ದಿಳ್ಳಿ ಷಹರು ಕೈ ವಶವಾಯಿತು; ಬಳಿಕ ಮಳೆಗಾಲದ ವರಿಗೂ ಇರುವ ದಿಳ್ಳಿಯಲ್ಲೇ ಛಾವಣಿ ಮಾಡಿ ಕೊಂಡು ಇದ್ದು, ಆ ಮೇಲೆ ಪಾನಪತಿಗೆ ಹೊರಟು ಬಂದರು. ಅಲ್ಲಿ ಉಭಯ ದಂಡಿನ ಸರದಾರರು ಒಬ್ಬರ ಭೇಟೀ ಒಬ್ಬರು ತೆಗೆದು ಕೊಳ್ಳುವದರ ದೆಶೆಯಿಂದ ಇವರಿಗೂ ಆಫ್ಘಾನರಿಗೂ ನಡಿಯು ಹೋಗುವ ಝುಗಳವು ಸಮಾಧಾನವಾಗುವ ಹಾಗೆ ತೋಚಿತು. ಇಷ್ಟು ನಡೆಯುವದಕ್ಕೆ ಎರಡು ತಿಂಗಳು ಹಿಡಿಯಿತು. ಆಗ ಮ

ಹಾರಾಷ್ಟ್ರ ದಂಡಿಗೆ ಧಾನ್ಯ ತುಟಾರೆಯಾದ್ದರಿಂದ ಝುಗಳ ಹೊರ್ತು, ಬೇರೆ ಉಪಾಯ ತೋರದೆ ಹೋಯಿತು.

೧೫. ಪಾನಪತಿಯ ಬಳಿಯಲ್ಲಿ ಝುಗಳವು ಯಾವಾಗ ನಡಿಯಿತು?

ಸನ್ ೧೭೬೧ನೇ ಈಸ್ವಿ ಜನವರಿ ೭ನೇ ತಾರೀಖಿನಲ್ಲಿ ನಡಿಯಿತು.

೧೬. ಈ ಯುದ್ಧದಲ್ಲಿ ಮಹಾರಾಷ್ಟ್ರದವರು ಸೋಲುವದಕ್ಕೆ ಕಾರಣವೇನು?

ಸ್ವಲ್ಪ ಕಾಲಕ್ಕೆ ಮುಂಚೆ ಭಾವು ಸಾಹೇಬನು ನಿಜಾಮ ಅಲ್ಲಿಯ ಸಂಗಡ ಯುದ್ಧವನ್ನು ಮಾಡಿ, ಗೆದ್ದು ಇದ್ದನು. ಈ ಗರ್ವದಿಂದ ತುಂಬಿ, ಮತ್ತ ನಾಗಿದ್ದು, ಚಾತುರ್ಯವಿಲ್ಲದೆ ಆಫ್ಘಾನರ ಸಂಗಡ ಯುದ್ಧವನ್ನು ಮಾಡಿದ್ದರಿಂದ ಅವನ ದಂಡು ಸೋತು ಹೋಯಿತು.

೧೭. ಈ ಯುದ್ಧದಲ್ಲಿ ಮಹಾರಾಷ್ಟ್ರದವರ ದಂಡಿನಲ್ಲಿ ಎಷ್ಟು ಜನ ನಾಶವಾದರು?

ಸುಮಾರು ನಾಲ್ಕರಲ್ಲಿ ಮೂರು ಪಾಲು; ಅಂದರೆ, ಎರಡು ಲಕ್ಷ ಜನರು ನಾಶವಾದರು.

೧೪. ಮಹಾರಾಷ್ಟ್ರ ಸರದಾರರೊಳಗೆ ಘಾಯ ತಿಂದವರೂ, ಹಿಮ್ಮೆಟ್ಟಿ ಪಲಾಯನವಾದವರೂ, ತೀರಾ ಸತ್ತವರೂ ಯಾರ್‍ಯಾರು?

ವಿಶ್ವಾಸರಾಯನು ಪೂರಾ ಘಾಯ ತಿಂದು ಇದ್ದಾನೆ ಎಂಬ ಸುದ್ದಿ ಕೇಳುತ್ತಲೇ, ಭಾವು ಸಾಹೇಬನು ತಾನು ಹತ್ತಿದ್ದ ಆನೆಯಿಂದ ಇಳಿದು, ಕುದುರೆಯ ಮೇಲೆ ಹತ್ತಿ ಕೊಂಡು, ಯುದ್ಧರಂಗದಲ್ಲಿ ಹೊಕ್ಕು, ಪುನಃ ಕಾಣಿಸಲಿಲ್ಲ. ಮತ್ತು ಇದೇ ಯುದ್ಧದಲ್ಲಿ ಬುಂದಿಲೇ ಗೋವಿಂದ ಪಂತನೂ ಮೇಹೇಂದಳೆ ಗಣಪತ ರಾವೂ ಸಹ ಮೊದಲ ಕೂಗಿನಲ್ಲೇ ಸತ್ತು ಹೋದರು. ಮತ್ತು ಜನಕೋಜೆಶಿಂದೆ ಎಂಬವನನ್ನೂ ಪೇಶ್ವಾಯವರ ಕಾಲ್ಬಳದ ಸರದಾರ ಗಾರದಿ ಇಬ್ರಾಮಖಾನನನ್ನೂ ಎದುರಾಳಿಗಳು ಹಿಡಿದು, ಕೊಂದು ಹಾಕಿದರು. ಮಲ್ಹಾರ ರಾವು ಹೋಳಕರನೂ, ದಾಮಾಜಿ ಗಾ

ಯಕವಾಡನೂ ಮೊದಲ ಕೂಗಿನಲ್ಲೇ ಹೆದರಿ ಕೊಂಡು, ಓಡಿ ಹೋದರು. ಇವರ ಹೊರ್ತು, ದಿಳ್ಳಿಯ ದೇಶದ ವಿಚಾರಣೆಗೆ ಇಟ್ಟು ಇದ್ದ ವಿಚೂರಕರನೂ, ರಾಜಾ ಬಹದರ್ ಎಂಬವನೂ ವಿಮುಖರಾಗಿ, ಹಿಂದಿರಿಗಿದರು. ಈ ಯುದ್ಧದಲ್ಲಿ ಸತ್ತವರ ವಿಷಯದ ದುಖ್ಖವು ಎಲ್ಲಾ ಮಹಾರಾಷ್ಟ್ರ ದೇಶವನ್ನು ಸುತ್ತಿ ಕೊಂಡಿತು.

೧೯. ಅಫ್ಘಾನರು ತಮ್ಮ ಕಟುಕತನವನ್ನು ಹ್ಯಾಗೆ ತೋರಿಸಿದರು?

ಅವರು ಶೆರೆ ಹಿಡಿದ ಗಂಡಸರೆಲ್ಲರನ್ನು ಕೊಂದು ಹಾಕಿ, ಹೆಂಗಸರನ್ನೂ ಮಕ್ಕಳನ್ನೂ ದಾಸರಾಗ ಮಾಡಿದರು.

೨೦. ಇಂಥಾ ದುಖ್ಖದ ವಾರ್ತೆಯನ್ನು ಕೇಳಿ, ನಾನಾ ಸಾಹೇಬನ ಅವಸ್ಥೆ ಏನಾಯಿತು?

ಮನೋರೋಗ ಹತ್ತಿ, ದಿನೇ ದಿನೇ ಕೃಶವಾಗಿ, ಕೆಲವು ತಿಂಗಳಲ್ಲಿ ಸತ್ತು ಹೋದನು.

೨೧. ಈ ನಾನಾ ಸಾಹೇಬನ ದಿನದಲ್ಲಿ ಮಹಾರಾಷ್ಟ್ರ ದೇಶದ ಸ್ಥಿತಿ ಹ್ಯಾಗೆ ಇತ್ತು?

ಪಾನಪತ ಯುದ್ಧಕ್ಕೆ ಪೂರ್ವದಲ್ಲಿ ಮಹಾರಾಷ್ಟ್ರ ದೇಶವು ಶಾನೆ ಉತ್ಕೃಷ್ಟದಲ್ಲಿ ಇತ್ತು. ಆದರೆ ಮೇಲಿನ ಯುದ್ಧದಲ್ಲಿ ಈ ದೇಶವು ಹೇಳ ಕೂಡದ ನಾಶನವನ್ನು ಹೊಂದಿತು. ಪುನಃ ಯಥಾ ಸ್ಥಿತಿಗೆ ಬರುವದಕ್ಕೆ ಶಾನೆ ದಿನಗಳು ಹಿಡಿಯಿತು.

೨೨. ನಾನಾ ಸಾಹೇಬನಿಗೂ ಇಂಗ್ಲಿಷಿನವರಿಗೂ ಸ್ನೇಹವಾಗುವದಕ್ಕೆ ಕಾರಣವೇನು?

ಕೊಂಕಣ ದೇಶದಲ್ಲಿ ನಡದ ಕೆಲವು ಯುದ್ಧಗಳಲ್ಲಿ ಭಾವೂ ಸಾಹೇಬನಿಗೆ ಇಂಗ್ಲಿಷಿನವರು ಸಹಾಯ ಮಾಡಿದರು. ಆ ಕಾರಣದಿಂದ ನಾನಾ ಸಾಹೇಬನು ಇಂಗ್ಲಿಷಿನವರಿಗೆ ಬಾಣ ಕೋಟೆಯನ್ನೂ ಇದರ ಸುತ್ತು ಮುತ್ತಲಿರುವ ಒಂಭತ್ತು ಗ್ರಾಮಗಳನ್ನೂ ಉಮ್ಮಳಿ ಹಾಕಿ ಕೊಟ್ಟನು.



# ದೊಡ್ಡ ಮಾಧವರಾವ ಸಾಹೇಬನನ್ನು ಕುರಿತು.

೧. ನಾನಾ ಸಾಹೇಬ ಎಂಬ ಬಾಳಾಜಿ ಬಾಜಿರಾವು ಸತ್ತ ತರುವಾಯು, ಈತನ ಸ್ಥಾನದಲ್ಲಿ ಯಾರು ಕುಳಿತರು?

ಈತನ ಹಿರೀ ಮಗನಾದ ಮಾಧವರಾವು.

೨. ಈ ಮಾಧವ ರಾಯನು ಪೇಶ್ವಾಯಿ ಕೆಲಸವನ್ನು ಎಷ್ಟು ದಿವಸ ನೋಡಿದನು?

ಹನ್ನೊಂದು ವರ್ಷ. ೧೭೭೨ನೇ ಈಸ್ವಿಯಲ್ಲಿ ಅಪುತ್ರನಾಗಿ ತೀರಿ ಹೋದನು.

೩. ಈ ಮಾಧವರಾವ ಸಾಹೇಬನು ಪೇಶ್ವಾಯಿಯ ಕಾರ್ಯ ನುರುಗಿಸುವದರಲ್ಲಿ ಎಂಥಾ ಗುಣವುಳ್ಳವನಾಗಿದ್ದನು?

ಈತನಲ್ಲಿ ಪ್ರಾಮಾಣಿಕತನವೂ, ಧೈರ್ಯವೂ ಈ ಎರಡು ದೊಡ ಗುಣಗಳು ಇದ್ದವು. ಮತ್ತು ಬಡವರನ್ನು ಪೀಡಿಸುವವರನ್ನೂ ದುರ್ಮಾರ್ಗರ

ನ್ನೂ ತಾವಿಗೆ ತಂದು, ಬಡವರನ್ನೇ ಮುಖ್ಯವಾಗಿ ಸಂರಕ್ಷಣೆ ಮಾಡಿ ಕೊಂಡು ಬಂದನು. ಇದಲ್ಲದೆ ಬಹು ಕಾಲಗಳಿಂದ ವಾಡಿಕೆಯಾಗಿ ಬಡವರನ್ನು ಬಿಟ್ಟಿ ಹಿಡಿಯುವದನ್ನು ನಿಲ್ಲಿಸಿದನು. ಇವನ ದಿವಸಗಳಲ್ಲಿ ಒಂದಾನೊಂದು ದಿವಸ ಸುಬೇದಾರ ವಿಸಾಜಿಪಂತ ಎಂಬುವನು ಕೆಲವು ಜನ ಬಡವರನ್ನು ಬಿಟ್ಟಿ ಹಿಡಿಸಿ, ಅವರ ತಲೆಯ ಮೇಲೆ ತನ್ನ ಸಾಮಾನನ್ನು ಹೊರಿಸಿ ಕೊಂಡು ಹೋಗುವ ಸಮಾಚಾರವು ಈ ಮಾಧವರಾವ ಸಾಹೇಬನಿಗೆ ತಿಳಿದು, ತಕ್ಷಣವೇ ಆ ಸಾಮಾನನ್ನು ಜಪ್ತಿಯಲ್ಲಿ ತಂದು, ಆ ಬಡವರ ಕೂಲಿ ಅವನಿಂದ ಕೊಡಿಸಿ ಕೊಟ್ಟನು. ಈತನಲ್ಲಿ ಯುದ್ಧದಲ್ಲಿ ಶೂರತ್ವವೂ, ದೇಶ ಪರಿಪಾಲನೆಯಲ್ಲಿ ಸಹನವೂ, ಕುಶಲವೂ, ಮೊದಲಾದ ಇಂಥಾ ಸುಗುಣಗಳು ಅನೇಕವಾಗಿದ್ದವು. ಆದರೆ ಈತನು ಪೂರ್ವ ವಯಸ್ಸಿನಲ್ಲಿಯೇ ತೀರಿ ಹೋದನು. ಆದ್ದರಿಂದ ಎಲ್ಲಾ ಮಹಾರಾಷ್ಟ್ರ ಜನರು ಕಣ್ಣೀರಿನಿಂದ ಕೈ ತೊಳದರು.

೪. ಈ ಮಾಧವ ರಾಯನ ಕಾರಕರ್ದಿಯಲ್ಲಿ ಯಾವ ಕಲಹವು ನಡೆಯಿತು?

ಈತನ ಚಿಕ್ಕಪ್ಪ ರಾಘೋಬಾ ಎಂಬವನು ಈತನ ಸಂಗಡ ಕಲಹ ಮಾಡಿದ್ದರಿಂದ, ಮಾಧವ ರಾವ ಸಾಹೇಬನು ಅವನನ್ನು ಪುಣೆಯಲ್ಲಿ ಶೆರೆಯಲ್ಲಿ ಇಡಿಸಿದನು.

೫. ದಾದಾ ಸಾಹೇಬ ಎಂಬ ರಾಘೋಬಾ ಎಂಥಾ ಮನುಷ್ಯನಾಗಿದ್ದನು?

ಬಹು ಶೂರನಾಗಿಯೂ, ಆ ಕಾಲಗಳಲ್ಲಿ ನಡೆದ ಝುಗಳಗಳಲ್ಲಿ ತಲೆಯಾದವನಾಗಿಯೂ ಇದ್ದನು. ಆದರೆ ರಾಜಕೀಯ ಕೆಲಸಕ್ಕೆ ಯೋಗ್ಯನಲ್ಲ. ಪೇಶ್ವಾಯಿಯ ಕೆಲಸ ತನಗೆ ಆಗ ಬೇಕೆಂದು ತುಂಬಾ ಅಭಿಲಾಷೆ ಇತ್ತು. ಆದ್ದರಿಂದ ಇವನಿಗೂ ಇವನ ಅಣ್ಣನ ಮಗನಿಗೂ ದ್ವೇಷ ಉಂಟಾಯಿತು.

೬. ಮಾಧವರಾವ ಸಾಹೇಬನು ಯಾವ ರೋಗದಲ್ಲಿ ಸತ್ತನು? ಆಗ್ಗೆ ಆತನ ವಯಸ್ಸು ಎಷ್ಟು?

ಕ್ಷಯ ರೋಗದಿಂದ ಥೇಯೂರಿನಲ್ಲಿ ಸತ್ತು ಹೋದನು. ಸಾಯುವಾಗ, ಇವನ ವಯಸ್ಸು ಇಪ್ಪತ್ತೆಂಟು ವರುಷಗಳಾಗಿತ್ತು.

೭. ಅವನು ಸಾಯುವಾಗ, ಮಹಾರಾಷ್ಟ್ರ ದೇಶದಲ್ಲಿ ಎಷ್ಟು ಹಣ ಉತ್ಪತ್ತಿ ಆಗುತ್ತಾ ಇತ್ತು?

ಶಿಂದೆ, ಹೋಳಕರು, ಗಾಯಕವಾಡ, ಈ ಸರದಾರರ ಶೀಮೆಗಳು ಕೂಡಿ, ಹತ್ತು ಕೋಟಿ ರೂಪಾಯಿಗಳು ಉತ್ಪತ್ತಿ ಆಗುತ್ತಾ ಇತ್ತೆಂದು, ಹೇಳುತ್ತಾರೆ. ಆದರೆ ನಿಜವಾದ ಉತ್ಪತ್ತಿಯು ಸುಮಾರು ಏಳು ಕೋಟಿ ರೂಪಾಯಿಗಳು ಇರಬಹುದು.

೮. ಈ ಮಾಧವರಾವ ಸಾಹೇಬನ ಕಾರಕರ್ದಿಯಲ್ಲಿ ಮಹಿಶೂರ ದೇಶವನ್ನು ಸ್ವತಂತ್ರದಿಂದ ಆಳುವದಕ್ಕೆ ಮಹಾರಾಷ್ಟ್ರ ಜನರ ಸಂಗಡ ಝುಗಳ ಮಾಡಿದವನು ಯಾರು?

ಹೈದರಲ್ಲಿ ತಾನು ಮಹಿಶೂರ ದೇಶವನ್ನು ಆಕ್ರಮಿಸಿ ಕೊಂಡು, ಮಹಾರಾಷ್ಟ್ರ ಜನರ ಸಂಗಡ ಝುಗಳವನ್ನು ಮಾಡ ಹತ್ತಿದನು.

೯. ಮಾಧವರಾವ ಸಾಹೇಬನ ದಿನದಲ್ಲಿ ಹೆಸರುವಾಶಿಯಾಗಿದ್ದ ಕಾರುಭಾರಿ ಯಾರು?

ಬಾಳಾಜೀ ಪಂತಭಾನು ಎಂಬವನು ಬಹು ಹೆಸರುವಾಶಿಯಾಗಿದ್ದನು. ಈತನನ್ನು ಜನರು ವಾಡಿಕೆಯಾಗಿ ನಾನಾ ಫಡನವೀಸು ಎಂದು ಕರೆಯುತ್ತಿದ್ದರು. ಈತನ ಪೂರ್ವೀಕರಿಂದಲೂ ಫಡನವಿಸೀಯ ಕೆಲಸವು ಇವರ ಮನೆತನಕ್ಕೆ ನಡಿಯುತ್ತಾ ಬಂತು. ಶಿವಾಜಿಯ ದಿನದಲ್ಲಿ ಇದ್ದ ಪಂತ ಅಮಾತ್ಯದ ಕೆಲಸವೂ, ಈ ಫಡನವೀಸಿಯ ಕೆಲಸವೂ ಒಂದೇ ರೀತಿಯಾಗಿ ಇವೆ.

---

## ನಾರಾಯಣ ರಾಯನನ್ನೂ ರಘುನಾಥ ರಾಯನನ್ನೂ ಕುರಿತು.

೧. ದೊಡ್ಡ ಮಾಧವರಾವ ಸಾಹೇಬನು ತೀರಿ

ಹೋದ ಮೇಲೆ, ಪೇಶ್ವಾಯಿಯ ಗದ್ದಿಗೆಯ ಮೇಲೆ ಯಾರು ಕುಳಿತರು?

ಈತನ ತಮ್ಮ ನಾರಾಯಣರಾವ ಸಾಹೇಬನು.

೨. ಈ ನಾರಾಯಣರಾವ ಸಾಹೇಬನು ಪೇಶ್ವಾಯಿಯ ಕೆಲಸವನ್ನು ಎಷ್ಟು ದಿವಸ ನೋಡಿದನು?

ಎಂಟು ತಿಂಗಳ ವರಿಗೂ ನೋಡಿದನು. ತರುವಾಯ ಪುಣೆಯಲ್ಲಿ ನಾರಾಯಣರಾವ ಸಾಹೇಬನ ಚಿಕ್ಕಪ್ಪನಾದ ರಾಘೋಬಾದಾದನು ಅವನನ್ನು ಕೊಲೆಗಡಿಗರಿಂದ ಕೊಂದು ಹಾಕಿಸಿ, ಪೇಶ್ವಾಯಿಯ ಕೆಲಸವನ್ನು ತಾನೇ ನಡಿಸ ಹೊಕ್ಕನು.

೩. ಆ ಮೇಲೆ ಏನಾಯಿತು?

ಈತನು ಕೊಲ್ಲಲ್ಪಟ್ಟ ತರುವಾಯ, ರಾಘೋಬಾದಾದಾ ಎಂಬ ರಘುನಾಥ ರಾಯನನ್ನು ಕುರಿತು ಮಹಾ ಸಂಶಯದಿಂದ ಎಲ್ಲಾ ಕಾರುಭಾರಿಗಳು ಆಲೋಚಿಸುತ್ತಾ ಇದರು.

೪. ಆ ಕಾರುಭಾರಿಗಳು ಸಂಶಯದಿಂದ ರಘುನಾಥ ರಾಯನನ್ನು ಕಿತ್ತು ಹಾಕಿದ ಮೇಲೆ, ಪೇಶ್ವಾಯಿಯ ಕೆಲಸದ ಮೇಲೆ ಯಾರನ್ನು ಕೂಡ್ರಿಸಿದರು?

ನಾರಾಯಣ ರಾವ ಸಾಹೇಬನು ಸಾಯುವಾಗ ಈತನ ಹೆಂಡತಿ ಗಂಗಾಬಾಯಿ ಎಂಬವಳು ಗರ್ಭಿಣಿಯಾಗಿದ್ದು, ಕೆಲವು ದಿನಗಳಲ್ಲೇ ಮಗನನ್ನು ಹೆತ್ತಳು. ಆಗ ರಘುನಾಥ ರಾಯನ ಎದುರಾಳಿಗಳು ಈತನಿಂದ ಕೆಲಸವನ್ನು ಕಿತ್ತು, ಈ ಮಗುವನ್ನು ಪೇಶ್ವಾಯಿಯ ಗದ್ದಿಗೆಯ ಮೇಲೆ ಕೂಡ್ರಿಸಿ, ಮಾಧವರಾವ ಎಂಬ ಹೆಸರನ್ನು ಇಟ್ಟು, ಈ ವರ್ತಮಾನವನ್ನು ಎಲ್ಲಾ ದೇಶಕ್ಕೂ ಪ್ರಸಿದ್ಧಿ ಮಾಡಿದರು. ಈ ಕಾಲದಲ್ಲಿ ಈ ದೇಶದ ಎಲ್ಲಾ ರಾಜ ಕಾರ್ಯವು ನಾನಾಫಡನವೀಸ ಎಂಬವನ ಮುಖಾಂತರ ನುರುಗುತ್ತಾ ಬಂತು.

---

ಚಿಕ್ಕ ಮಾಧವರಾವ ಸಾಹೇಬನನ್ನು ಕುರಿತು.

೧. ಚಿಕ್ಕ ಮಾಧವರಾವ ಸಾಹೇಬನ ವಾಡಿಕೆಯಾದ ಹೆಸರು ಏನು?

ಸವಾಯಿ ಮಾಧವರಾವು.

೨. ರಾಘೋಬಾದಾದನು ತನ್ನ ಅಭಿಲಾಷೆಯನ್ನು ನೆರವೇರಿಸಿ ಕೊಳ್ಳ ಯಾರ ಕಡೆಗೆ ತಿರಿಗಿ ಕೊಂಡನು?

ಇವನು, ಇಂಗ್ಲಿಷಿನವರ ಒತ್ತಾಸೆಯಿಂದ ತನ್ನ ಮನೋಭೀಷ್ಟ ನೆರವೇರೀತೆಂದು ತಿಳಿದು, ಅವರಲ್ಲಿ ಹೋಗಿ, ನೀವು ಪುನಃ ನನಗೆ ಪೇಶ್ವಾಯಿಯ ಪಟ್ಟ ಕಟ್ಟಿಸಿದರೆ, ನಾನು ನಿಮಗೆ ಸಾಷ್ಟಿ ನಡುಗಡ್ಡೆಯನ್ನೂ ವಸಯಿ ಗ್ರಾಮವನ್ನೂ ಗುಜರಾಥಿಗೆ ಸೇರಿದ ಕೆಲವು ಪ್ರಾಂತ್ಯಗಳನ್ನೂ ಕೊಡುವೆನು ಎಂದು ಹೇಳಿ ಕೊಂಡನು. ಇಂಗ್ಲಿಷಿನವರಿಗೆ ಬಹು ದಿವಸಗಳಿಂದ ಸಾಷ್ಟಿ ನಡುಗಡ್ಡೆಯನ್ನು ಸಂಪಾದಿಸ ಬಹಳ ಅಪೇಕ್ಷೆ ಇರುವದರಿಂದ, ಒಪ್ಪಿ ಕೊಂಡರು. ಇಷ್ಟರಲ್ಲೇ ಪೋರ್ತುಗಾಲ್ ದೇಶದ ಧೊರೆ

ಸಾಷ್ಟಿ ಮುಂತಾದ ಸಂಸ್ಥಾನಗಳನ್ನು ಹಿಂದೂ ಜನರಿಂದ ಅಪಹರಿಸುವದಕ್ಕೆ ದಂಡನ್ನು ಕಳುಹಿಸಿದ್ದಾನೆಂಬ ಸುದ್ದಿಯನ್ನು ತಿಳಿದು, ಬೊಂಬಾಯಿ ಸಂಸ್ಥಾನೀಕರು ಬಹು ತ್ವರ್ಯದಿಂದ ಆ ಸಾಷ್ಟಿ ನಡುಗಡ್ಡೆಯನ್ನು ತಮ್ಮ ಕೈವಶ ಮಾಡಿ ಕೊಂಡರು.

೩. ರಘುನಾಥ ರಾಯನಿಗೆ ಪೇಶ್ವಾಯಿಯ ಪಟ್ಟವನ್ನು ಕಟ್ಟ ಬೇಕೆಂದು, ಮೊದಲು ಇಂಗ್ಲಿಷಿನವರು ಒಪ್ಪಿ ಕೊಂಡು, ಆ ಮೇಲೆ ಕೈ ಬಿಟ್ಟದ್ದು ಯಾಕೆ?

ಯಾಕೆಂದರೆ, ಆಗ್ಯೆ ಕಲಕತ್ತಾ ಗವರ್ನರ್ ಜನರಲ್ ಸಾಹೇಬ ಬಹದರವರ ಆಜ್ಞೆಯ ಮೇರಿಗೆ ಬೊಂಬಾಯಿ ಮದ್ರಾಸ್ ಈ ಎರಡು ಸಂಸ್ಥಾನಗಳು ತಮ್ಮ ಸ್ವಾಧೀನದಲ್ಲಿಯೇ ಇರ ಬೇಕು ಎಂಬದಾಗಿ ಗೊತ್ತಾಗಿ ಇತ್ತು. ಆದ್ದರಿಂದ ಈ ಗವರ್ನರ್ ಜನರಲ್ ಸಾಹೇಬರವರು ಹಿಂದಕ್ಕೆ ಆಗಿದ್ದಂಥ ಎಲ್ಲಾ ಮಾತುಗಳನ್ನು ಮುರಿದು ಬಿಟ್ಟು, ಹೊಸದಾಗಿ ಒಂದು ಒಪ್ಪಂದ ಮಾಡಿ ಕೊಳ್ಳುವ

ದಕ್ಕೆ ತಮ್ಮ ಕಡೆಯ ಒಬ್ಬ ವಕೀಲನನ್ನು ನಾನಾ ಫಡನವೀಸನೇ ಮೊದಲಾದ ಕಾರಭಾರಿಗಳ ಬಳಿಗೆ ಕಳುಹಿಸಿದರು. ಆಗ ವಕೀಲನಿಗೂ ಇವರಿಗೂ ಮಾತಿನ ಗೊತ್ತು ಆಯಿತು; ಹ್ಯಾಗೆಂದರೆ, ಸಾಷ್ಟಿ ನಡುಗಡ್ಡೆ ಇಂಗ್ಲಿಷಿನವರಿಗೆ ಬಿಟ್ಟು ಕೊಡಬೇಕು ಎಂತಲೂ, ರಘುನಾಥ ರಾಯನನ್ನು ಕೋಪರಗಾಂವ ಎಂಬ ಊರಿನಲ್ಲಿ ಇಟ್ಟು, ಸಂಬಳವಾಗಲಿ, ಅಥವಾ ಇನ್ನೇನಾಗಲಿ ಕೊಡಬೇಕು ಎಂಬ ಗೊತ್ತು ಆಯಿತು.

೪. ಕಟ್ಟಕಡೆಗೆ ರಘುನಾಥ ರಾಯನ ಗತಿ ಏನಾಯಿತು?

ಇಷ್ಟಾಗಿಯೂ ರಘುನಾಥ ರಾಯನಿಗೆ ಪೇಶ್ವೆಯಿಯ ಹಂಬಲು ಮರಿಯುದೆ, ತನ್ನ ಮನಸ್ಸಿನಲ್ಲಿ ಅಯ್ಯೋ, ನಾನು ಮಾಡಿದ ಸಾಹಸ ವ್ಯರ್ಥವಾಯಿತೆಂದು, ಕಟ್ಟಕಡೆಗೆ ಕೋಪರಗಾಂವ ಎಂಬ ಊರಿಗೆ ಹೋಗುವದಕ್ಕೆ ಒಡಂಬಟ್ಟು, ಅಲ್ಲಿಗೆ ಹೋಗಿ, ೧೭೮೪ನೇ ಈಸ್ವಿಯಲ್ಲಿ ಸತ್ತು ಹೋದನು.

೫. ರಘುನಾಥ ರಾಯನಿಗೆ ಎಷ್ಟು ಜನ ಮಕ್ಕಳು ಇದ್ದರು?

ಇಬ್ಬರು ಮಕ್ಕಳು. ಹಿರಿಯವನ ಹೆಸರು ಬಾಜೀರಾವ ಸಾಹೇಬನು. ಈತನೇ ಮುಂದೆ ಪೇಶ್ವಾಯಿಯ ಪಟ್ಟದ ಮೇಲೆ ಕುಳಿತನು. ಕಿರಿಯವನ ಹೆಸರು ಚಿಮಣಾಜಿಅಪ್ಪ. ಇವರು ಹೊರ್ತು ಅಮೃತರಾವ ಸಾಹೇಬ ಎಂಬದಾಗಿ ಇನ್ನೊಬ್ಬ ಸಾಕು ಮಗ ಇದ್ದನು.

೬. ಸವಾಯಿ ಮಾಧವರಾವ ಸಾಹೇಬನು ಪೇಶ್ವಾಯಿಯ ಕೆಲಸವನ್ನು ಎಷ್ಟು ದಿನ ನೋಡಿ ಕೊನೆಗೆ ಏನು ಗತಿ ಆದನು?

ಇವನು ಹುಟ್ಟಿದ ತರುವಾಯ ಇವನ ತಾಯಿಯು ಸತಾರೆ ಮಹಾ ರಾಜನಿಂದ ಪೇಶ್ವಾಯಿಯ ಬಹುಮಾನದ ಉಡುಗೆರೆಯನ್ನು ಕೊಡಿಸಿದಳು. ತರುವಾಯ ೧೧ ವರುಷ ಹೆಸರು ಮಾತ್ರದಿಂದ ಪೇಶ್ವಾಯಿಯ ಕೆಲಸ ನಡೆಯುತ್ತಾ ಬಂತು. ಆದರೆ ಇವನು ಎಳ್ಳಷ್ಟು ಸ್ವತಂತ್ರ ಇಲ್ಲದವನಾಗಿ,

ನಾನಾಫಡನವೀಸನ ಆಜ್ಞೆಯಿಂದ ಕಟ್ಟಲ್ಪಟ್ಟಿದ್ದ ನು. ಆದ್ದರಿಂದ ಇವನು ಬಹು ನಾಚಿಕೆ ಪಟ್ಟು, ತನ್ನ ಮನೆಯ ಮೂರನೇ ಅಂತಸ್ತಿನಿಂದ ಕೆಳಕ್ಕೆ ಹಾರಿ, ಕಾಲು ಮುರಿದು, ಎರಡನೇ ದಿನವೇ, ಅಂದರೆ, ಸನ್ ೧೭೯೫ನೇ ಈಸ್ವಿಯಲ್ಲಿ ಸತ್ತು ಹೋ ದನು.

೭. ಈ ಸವಾಯಿ ಮಾಧವ ರಾಯನ ದಿನ ದಲ್ಲಿ ನಾನಾಫಡನವೀಸನ ಉದ್ಯೋಗವನ್ನು ಕಿತ್ತು ಹಾಕ ಬೇಕೆಂದು, ಪ್ರಯತ್ನ ಪಟ್ಟವನು ಯಾವ ನು?

ಮಹಾ ರಾಜ ಶಿಂದೆ ಎಂಬವನು ನಾನಾಫಡನ ವೀಸನ ಅಧಿಕಾರವನ್ನು ತೆಗೆಯ ಶಾನೆ ತಂತ್ರಗಳ ನ್ನು ಮಾಡುತ್ತಾ ಇದ್ದನು. ಆದರೆ ಈ ನಾನಾ ಫಡನ ವೀಸನು–ತನ್ನ ಎಲ್ಲಾ ವೈರಿಗಳನ್ನು ಗೆದ್ದಂ ತೆ ಇವನನ್ನು ಯಾಕೆ ಗೆಲ್ಲ ಬಾರದಾಗಿತ್ತು? ಅಂ ದರೆ ಅವನು ಬಹಳ ಬುದ್ಧಿವಂತನಾಗಿಯೂ ಬಲಾ ಢ್ಯನಾಗಿಯೂ ಇದ್ದದರಿಂದಲೇ. ಆದರೆ ಈ

ಮಹಾ ರಾಜ ಶಿಂದೆಯು ಸ೯ ೧೭೯೪ನೇ ಈಸ್ವಿಯಲ್ಲಿ ಪುಣೆಯ ಹತ್ತ್ರರ ವಾನವಾಡಿ ಎಂಬ ಊರಲ್ಲಿ ಸತ್ತು ಹೋದನು. ತರುವಾಯ ಇವನ ಅಣ್ಣಾನ ಮೊಮ್ಮಗ ದೌಲತ ರಾವು ಶಿಂದೆ ಎಂಬವನು ಇವನ ಕೆಲಸಕ್ಕೆ ಬಂದನು.

೮. ನಾನಾಫಡನವೀಸು ರಾಜಾಧಿಕಾರ ನಡಿಸುವಲ್ಲಿ ಇವನ ಕೈ ಕೆಳಗೆ ಇದ್ದಂಥ ದೊಡ್ಡ ದೊಡ್ಡ ಸರದಾರರು ಯಾರು?

ಹರಿಪಂತ ಫಡಿಕೆ ಎಂಬವನೂ, ಪರುಶುರಾಮ ಪಂತ ಭಾವು ಎಂಬವನೂ, ಈ ಇಬ್ಬರು ಮಹಾರಾಷ್ಟ್ರ ದಂಡಿನಲ್ಲಿ ಪ್ರಮುಖ ದಳವಾಯಿಗಳಾಗಿದ್ದರು.

೯. ನಾನಾಫಡನವೀಸನ ಸವಾಯಿ ಮಾಧವ ರಾವ ಸಾಹೇಬರ ಕಾಲದಲ್ಲಿ ಯಾವ ಯಾವ ಯುದ್ಧಗಳು ನಡೆದವು? ಅವುಗಳ ಸಂಗತಿ ಏನು?

ಈ ನಾನಾಫಡನವೀಸನ ತಮ್ಮ ಮೊರೋಬಾ ದಾದಾ ಫಡನವೀಸು ಎಂಬವನು ರಾಘೋಬಾ ದಾ

ದಾನಿಗೆ ಪುನಹಾ ಪೇಶ್ವಾಯಿಯ ಪಟ್ಟವನ್ನು ಕಟ್ಟಿ ಸಬೇಕೆಂದು ಪ್ರಯತ್ನದಿಂದ ಬೊಂಬಾಯಿ ಸಂಸ್ಥಾನಿಕರಾದ ಇಂಗ್ಲಿಷಿನವರಿಗೆ ಹೇಳಿ ಕೊಂಡು, ಅವರನ್ನು ಕರೆದು ಕೊಂಡು, ಪುಣೆಗೆ ಬರುತ್ತಾ ಇರುವ ದಾರಿಯಲ್ಲೇ ವಡಗಾಂವ ಊರಿನಲ್ಲಿ ಅಪಜಯ ಹೊಂದಿ, ಹೊರಟು ಹೋದರು. ಅಲ್ಲಿಂದ ಇಂಗ್ಲಿಷಿನವರಿಗೂ ಮಹಾರಾಷ್ಟ್ರದವರಿಗೂ ಮೂರಾವರ್ತಿ ಝಗಳವಾಯಿತು. ಆದರೆ ಕೇವಲ ಹೇಳಿಸಿ ಕೊಳ್ಳ ತಕ್ಕ ಝಗಳಗಳು ಅಲ್ಲ. ಕೊನೆಗೆ ಇಂಗ್ಲಿಷನವರಿಗೂ ಮಹಾರಾಷ್ಟ್ರದವರಿಗೂ ಒಡಂಬಡಿಕೆಯಾಗಿ, ಝಗಳ ಸಮಾಧಾನವಾಯಿತು. ತರುವಾಯ ಸರ್ ೧೭೯೫ನೇ ಈಸ್ವಿಯಲ್ಲಿ ಮಹಾರಾಷ್ಟ್ರದವರಿಗೂ ನಿಜಾಮು ಅಲ್ಲೀ ಎಂಬವನಿಗೂ ಖರಡಾ ಮಜಲಿನಲ್ಲಿ ಅಗಾಧ ಝಗಳ ನಡೆದು, ಕೊನೆಗೆ ಮಹಾರಾಷ್ಟ್ರದವರಿಗೆ ದೊಡ್ಡ ಜಯವು ದೊರೆಯಿತು. ಆಗ ನಿಜಾಮು ಅಲ್ಲಿಯಿಂದ ಕಪ್ಪಕ್ಕೆ ಒ

ದಲಾಗಿ ಅವನ ಶೀಮೆಯಲ್ಲಿ ಕೆಲವು ದೇಶವನ್ನು ತೆಗೆದು ಕೊಂಡರು. ಮತ್ತು ಸವಾಯಿ ಮಾಧವ ರಾಯನ ದಿನದಲ್ಲಿ ಮಹಾರಾಷ್ಟ್ರದವರಿಗೂ ಇನ್ನು ಬೇರೆ ದೇಶಸ್ಥರಿಗೂ ಶಾನೆ ಝಗಳಗಳು ನಡೆದವು. ಆದರೆ ಅವುಗಳ ಪೈಕಿ ಹೈದರಲ್ಲಿಯ ಮಗ ಟೀಪು ಸುಲ್ತಾನನ ಸಂಗಡ ಮಹಾರಾಷ್ಟ್ರದವರಿಗೆ ನಡೆದ ಝಗಳವೇ ಕೇವಲ ದೊಡ್ಡದಾಗಿತ್ತು.

---

## ಎರಡನೇ ಬಾಜಿರಾಯನನ್ನು ಕುರಿತು.

೧. ಸವಾಯಿ ಮಾಧವರಾಯನು ತೀರಿ ಹೋದ ತರುವಾಯ, ಪೇಶ್ವಾಯಿಯ ಪಟ್ಟ ಯಾರಿಗೆ ಆಯಿತು?

ರಾಘೋಬಾದಾದನ ಹಿರೀ ಮಗನಾದ ಬಾಜೀರಾವ ಸಾಹೇಬನಿಗೆ ಸನ್ ೧೭೯೬ನೇ ಈಸ್ವಿಯಲ್ಲಿ ಪೇಶ್ವಾಯಿಯ ಪಟ್ಟವು ಕಟ್ಟಲ್ಪಟ್ಟಿತು. ಆದರೆ ಈ ಪೇಶ್ವಾಯಿಯ ಪಟ್ಟದ ಮೇಲೆ ಬಾಜೀ ರಾವ ಸಾ

ಹೇಬನು ಕುಳಿತದ್ದು ನಾನಾಫಡನವೀಸಗೆ ಎಷ್ಟು ಮಾತ್ರವೂ ಸಮ್ಮತವಿರಲಿಲ್ಲ. ಯಾಕಂದರೆ ಇವನಿಗೂ ಅವನಿಗೂ ಬಹು ದಿವಸದಿಂದ ಮಾತ್ಸರ್ಯ ಇತ್ತು. ಇದ್ದಾಗ್ಯೂ ನಾನಾಫಡನವೀಸನ ಪ್ರಯತ್ನವು ಕೊನೆ ಸಾಗಲಿಲ್ಲ.

೨. ತಿರಿಗಿ ನಾನಾಫಡನವೀಸನ ಅವಸ್ಥೆ ಏನಾಯಿತು?

ಬಾಜೀರಾವ ಸಾಹೇಬನು ಇವನನ್ನು ತನ್ನ ಹತ್ತರದಲ್ಲೇ ಮುಖ್ಯ ಕಾರಭಾರಿಯಾಗಿ ಇಟ್ಟು ಕೊಂಡು ಇದ್ದನು. ಆದರೆ ಸಮಯವನ್ನು ಅರಿತು, ನಾನಾಫಡನವೀಸನನ್ನು ಉದ್ಯೋಗದಿಂದ ಹೊರಗೆ ಮಾಡಿ, ಬಂಧಕದಲ್ಲಿ ಸೇರಿಸ ಬೇಕು ಎಂದು, ದೌಲತ ರಾವು ಶಿಂದೆ ಎಂಬವನ ಸಂಗಡ ಸೂಚಿಸಿದನು. ಬಳಿಕ ಆ ದೌಲತ ರಾವು ಶಿಂದೆಯು ಅವನನ್ನು ಹಿಡಿದು ಕೊಂಡು, ನಗರದ ಕೋಟೆಯಲ್ಲಿ ಸೇರಿಸಿದನು. ಆದರೆ ಕೆಲವು ದಿವಸಗಳ ಮೇಲೆ, ಪುನಃ ಇವನ ಉದ್ಯೋಗ ಇವನಿಗೆ ಕೊಡ ಬೇ

ಕು ಎಂಬ ಅಗತ್ಯವು ಬಾಜೀರಾವು ಸಾಹೇಬನಿಗೆ ಹುಟ್ಟಿತು. ಅಷ್ಟರಲ್ಲೇ ಈ ನಾನಾಫಡನವೀಸು ಸ್ನ ೧೮೦೦ನೇ ಈಸ್ವಿಯಲ್ಲಿ ಮೃತವಾದನು.

೩. ಈ ನಾನಾಫಡನವೀಸು ಎಂಥಾ ಗುಣವುಳ್ಳವನಾಗಿದ್ದನು?

ಇವನು ತನ್ನ ಬುದ್ಧಿ ಕುಶಲತೆಯಿಂದ ದೇಶವನ್ನು ಆಬಾದು ಮಾಡಿ, ಎಲ್ಲಾ ಪ್ರಜೆಗಳನ್ನು ಬಹು ಚನ್ನಾಗಿ ಕಾಪಾಡಿ ಕೊಂಡು ಬಂದನು. ಮತ್ತು ಪ್ರಭುತ್ವ ಮಾಡುವದರಲ್ಲಿ ಇವನಂಥ ಕುಶಲ ಬುದ್ಧಿಯುಳ್ಳವರು ಈ ಹಿಂದೂಸ್ಥಾನದಲ್ಲಿ ಆಗ್ಯೆ ಯಾರೂ ಇರಲಿಲ್ಲ. ಆದರೆ ಇವನು ಕಾಲವಾದ ಬಳಿಕ, ಮಹಾರಾಷ್ಟ್ರದವರ ಚಾತುರ್ಯವೂ ಪ್ರಮಾಣೀಕವೂ ಮೊದಲಾದ ಸುಗುಣಗಳು ಅವನ ಸಂಗಡಲೇ ಹೋದವು, ಎಂದು ಹೇಳುತ್ತಾರೆ.

೪. ಬಾಜೀರಾವು ಸಾಹೇಬನು ಪೇಶ್ವಾಯಿಯ ಪಟ್ಟಕ್ಕೆ ಕುಳಿತ ಮೇಲೆ, ಪುಣೆಯಲ್ಲಿದ್ದ ಭಾರಿ ವರ್ತಕರಿಗೆ ದಂಡ ಕಟ್ಟಿ, ಅವರಿಂದ ಬಲಾತ್ಕಾ

ರವಾಗಿ ಹಣಾ ವಸೂಲು ಮಾಡುವದಕ್ಕೆ ಏನು ಕಾರಣ ಇತ್ತು?

ಬಾಜೀರಾವು ಸಾಹೇಬು ದೌಲತನ ರಾವು ಶಿಂದೆಯ ಸಂಗಡ, ನನಗೆ ನೀನು ಪೇಶ್ವಾಯಿಯ ಪಟ್ಟವನ್ನು ಕಟ್ಟಿಸಿದ್ದೇ ಉಂಟಾದರೆ, ಎರಡು ಕೋಟಿ ರೂಪಾಯಿಗಳನ್ನು ಕೊಡುತ್ತೇನೆ ಎಂದು, ಮಾತು ಕೊಟ್ಟು ಇದ್ದನು. ಅದೇ ಮೇರೆಗೆ ಇವನಿಗೆ ಪಟ್ಟವಾಗುತ್ತಲೂ, ಹಣವಿಗೆ ತಗಲಿ ಕೊಂಡನು. ಆಗ ಇವನಲ್ಲಿ ಏನೂ ಹಣವಿಲ್ಲದೆ ಹೋದ್ದರಿಂದ, ಇವನೂ ಅವನೂ ಶೇರಿ, ಮಾತನಾಡಿ ಕೊಂಡು, ಪುಣೇ ಪಟ್ಣದಲ್ಲಿ ಇದ್ದ ಭಾರಿ ವರ್ತಕರನ್ನು ಬಲಾತ್ಕಾರದಿಂದ ಹಿಡಿ ತರಿಸಿ, ಬಡಿಸಿ, ನಾನಾ ವಿಧದ ಹಿಂಸೆಗಳನ್ನು ಪಡಿಸಿ, ಅನ್ಯಾಯವಾಗಿ ಅವರಿಗೆ ದಂಡ ಕಟ್ಟಿ, ಹಣ ವಸೂಲು ಮಾಡಿ ಕೊಂಡರು.

ಕ್ರಿ. ಸ್ತ ೧೮೦೨ನೇ ಈಸ್ವಿಯಲ್ಲಿ, ಬಾಜೀರಾ

ವ ಸಾಹೇಬನು ಪುಣೆ ಪಟ್ಣವನ್ನು ಬಿಟ್ಟು, ಓಡಿ ಹೋಗುವದಕ್ಕೆ ಕಾರಣವೇನು?

ದೌಲತ ರಾವು ಶಿಂದೆಯು ತನ್ನ ಅಲ್ಪ ದಂಡನ್ನು ಪುಣೆ ಪಟ್ಣದ ಮೇಲೆ ಕಾವಲು ಇಟ್ಟು, ದೇಶ ಸಂರಕ್ಷಣೆಗೋಸ್ಕರ ತಾನು ಹಿಂದೂಸ್ಥಾನಕ್ಕೆ ಹೊರಟು ಹೋದನು. ಆ ಸಮಯದಲ್ಲಿ ಯಶವಂತ ರಾವು ಹೊಳಕರೆ ಎಂಬವನು, ದಂಡು ಎತ್ತಿಕೊಂಡು ಬಂದು, ಪುಣೆಯ ಮೇಲೆ ಬಿದ್ದು, ಪೇಶ್ವಾಯಿಯವರ ದಂಡನ್ನೂ ಶಿಂದೇರ ದಂಡನ್ನೂ ಸಹ ಗೆದ್ದನು. ಆಗ ಬಾಜಿ ರಾವ ಸಾಹೇಬನು ಪುಣೆಯನ್ನು ಬಿಟ್ಟು, ಓಡಿ ಹೋದನು.

೬. ಬಾಜಿ ರಾವ ಸಾಹೇಬನು ಯಾವ ಗಡಕ್ಕೆ ಓಡಿ ಹೋದನು?

ಮೊದಲು ರಾಯಗಡಕ್ಕೆ ಓಡಿ ಹೋದನು. ಆದರೆ ಅಲ್ಲಿಯೂ ಸಹ ನಿಲ್ಲದೆ, ಅಲ್ಲಿಂದ ವಸಯಿ ಎಂಬ ಊರಿಗೆ ಓಡಿ ಹೋಗಿ, ಅಲ್ಲಿ ಇಂಗ್ಲಿಷಿನವರ

ಮರೆ ಹೊಕ್ಕು, ಅವರಿಂದ ಕೆಲವು ಭರವಸ ಮಾತುಗಳನ್ನು ಗೊತ್ತು ಮಾಡಿ ಕೊಂಡನು.

೭. ಇಂಗ್ಲಿಷಿನವರಿಗೂ ಬಾಜೀ ರಾವ ಸಾಹೇಬನಿಗೂ ಮಾತಿನ ಗೊತ್ತು ಹ್ಯಾಗೆ ಆಯಿತು?

ಹ್ಯಾಗಂದರೆ, ಇಂಗ್ಲಿಷಿನವರು ಎಂಟು ಸಾವಿರ ಶಿಪಾಯಿಗಳನ್ನು ಬಾಜಿ ರಾವು ಸಾಹೇಬನ ಕೈ ಕೆಳಗೆ ಕೊಡ ಬೇಕು; ಇವರ ಸಂಬಳ ಸಾರಿಗೆ ಏನು ಇದ್ದಾಗ್ಯೂ, ಬಾಜಿ ರಾಯನೇ ಕೊಡಿದ್ದು, ಆದರೆ ಈಗ ಇಂಗ್ಲಿಷಿನವರು ಪುನಃ ಬಾಜಿ ರಾಯನಿಗೆ ಪಟ್ಟಾ ಕಟ್ಟಿ, ಈಗಿರುವ ಶತ್ರುಗಳನ್ನೂ ಮುಂದೆ ಬರ ಹೋಗುವ ಶತ್ರುಗಳನ್ನೂ ಇಂಗ್ಲಿಷಿನವರೇ ಗೆದ್ದು, ಬಾಜೀ ರಾಯನನ್ನು ಕಾಪಾಡಿ ಕೊಂಡು ಬರ ಬೇಕು ಎಂದು, ಗೊತ್ತು ಆಯಿತು.

೮. ಬಾಜಿ ರಾವ ಸಾಹೇಬನಿಗೂ ಇಂಗ್ಲಿಷಿನವರಿಗೂ ಮಾತಿನ ಗೊತ್ತು ಯಾವಾಗ ಆಯಿತು? ಆ ಮೇಲೆ ಮಹಾರಾಷ್ಟ್ರ ದೇಶದ ಸ್ಥಿತಿ ಹ್ಯಾಗೆ ಆಯಿತು?

ಸರ್ ೧೮೦೨ನೇ ಈಸ್ವಿಯಲ್ಲಿ ಇಂಗ್ಲಿಷಿನವರು ಬಾಜಿ ರಾಯನನ್ನು ಬೆನ್ನ ಹಾಕಿ ಕೊಂಡರು. ಅಂದಿನಿಂದ ಮಹಾರಾಷ್ಟ್ರ ದೇಶದ ಸ್ವತಂತ್ರವು ದಿನೇ ದಿನೇ ಇಳತರವಾಗುತ್ತಾ ಬಂತು.

೯. ಪುಣೆ ಪಟ್ಣವನ್ನು ಆಕ್ರಮಿಸಿ ಕೊಂಡು ಇದ್ದ ಯಶವಂತರಾಯನ ವರ್ತಮಾನವೇನು?

ಬಾಜಿ ರಾವ ಸಾಹೇಬನಿಗೆ ಪುನಃ ಪೇಶ್ವಾಯಿಯ ಪಟ್ಟವನ್ನು ಕಟ್ಟುವದಕ್ಕೆ ಇಂಗ್ಲಿಷಿನವರು ಪುಣೆಗೆ ಬರುವ ಅಷ್ಟರಲ್ಲೇ, ಈ ಯಶವಂತ ರಾವ ಹೊಳಕರ, ಮಾಳವ ದೇಶಕ್ಕೆ ಹೋಗ ಬೇಕು ಎಂಬದಾಗಿ ಆಲೋಚಿಸಿ, ಮೊದಲು ಪುಣೆ ಪಟ್ಣವನ್ನು ಸುಲಿಗೆ ಮಾಡಿಸಿ, ಅನೇಕರನ್ನು ಹೊಡಿಸಿ, ಬಡಿಸಿ, ಹಾಳು ಮಾಡಿದನು.

೧೦. ಬಾಜಿ ರಾವ ಸಾಹೇಬನಿಗೆ ಒತ್ತಾಸೆ ಮಾಡ ಬಂದಂಥ ಇಂಗ್ಲಿಷಿನವರ ದಂಡು ಎಲ್ಲಿ ಛಾವಣಿ ಮಾಡಿತು?

ಘೋಡ ನದಿ ತೀರದಲ್ಲಿ. ಅಲ್ಲಿ ಒಂದು ದೊಡ್ಡ ಊರು ಆಯಿತು. ಈ ಊರಿಗೆ ಮಹಾರಾಷ್ಟ್ರದವರು ಘೋಡ ನದಿ ಎಂದೂ, ಇಂಗ್ಲಿಷಿನವರು ಶಿರೋರ ಎಂದೂ, ಕರೆಯುತ್ತಾರೆ. ಆದರೆ ಸ್ಟ೧೮೧೮ನೇ ಈಸ್ವಿಯಲ್ಲಿ ಆ ಛಾವಣಿಯನ್ನು ಎತ್ತಿ ಬಿಟ್ಟರು. ಅದರಿಂದ ಈಗ ಅದರಲ್ಲಿ ಅಷ್ಟು ಜನರು ಇಲ್ಲ.

೧೧. ಬಾಜಿ ರಾವ ಸಾಹೇಬನಿಗೆ ಪುನಃ ಪೇಶ್ವಾಯಿಯ ಪಟ್ಟವು ಆದ ಮೇಲೆ, ಏನು ಸಂಗತಿ ನಡೆಯಿತು?

ಬಾಜಿ ರಾವ ಸಾಹೇಬನಿಗೆ ಪುನಃ ಪಟ್ಟವಾದ ಮೊದಲ್ಗೊಂಡು ಸ್ಟ ೧೮೧೭ನೇ ಈಸ್ವಿಯ ವರಿಗೂ ಮಹಾರಾಷ್ಟ್ರ ದೇಶವು ಸುರಕ್ಷಿತವಾಗಿ ಇತ್ತು. ತರುವಾಯ ಬಾಜಿ ರಾವ ಸಾಹೇಬನಿಗೂ ಇಂಗ್ಲಿಷಿನವರಿಗೂ ಕದಚ್ಚು ಹುಟ್ಟಿ ಯುದ್ಧಕ್ಕೆ ಪ್ರಾರಂಭ ಆಯಿತು. ಈ ಯುದ್ಧದಿಂದ ಮಹಾರಾಷ್ಟ್ರ ದೇಶವು ಶಾನೆ ನೆಲ ಹತ್ತುತ್ತಾ ಬಂತು.

೧೨. ಇಂಗ್ಲಿಷಿನವರಿಗೂ ಬಾಜಿ ರಾವ ಸಾಹೇಬನಿಗೂ ಮಧ್ಯೆ ಕಡಜ್ಜು ಹುಟ್ಟಿ, ಯುದ್ಧ ನಡೆಯುವದಕ್ಕೆ ಏನು ಕಾರಣ ಸಂಭವಿಸಿತು?

ಈ ಬಾಜಿ ರಾವ ಸಾಹೇಬನಿಗೆ ಮೊದಲಿನಿಂದಲೂ ಇಂಗ್ಲಿಷಿನವರ ಮೇಲೆ ಹೊಟ್ಟೆಕಿಚ್ಚು ಇತ್ತು. ಇದ್ದಾಗ್ಯೂ, ಸರ್ ೧೮೦೨ನೇ ಈಸ್ವಿಯಲ್ಲಿ ಇವನಿಗೆ ಬಹಳ ಸಂಕಟ ಬಂದದ್ದರಿಂದ, ತೀರ ಬಾರದ ಸಂಕಟಕ್ಕೆ ಹೋಗಿ, ಇಂಗ್ಲಿಷಿನವರ ಮರೆ ಬಿದ್ದನು. ತನ್ನ ಕಾರ್ಯ ಆದ ಮೇಲೆ, ಯಥಾ ಪ್ರಕಾರವೇ ಇಂಗ್ಲಿಷಿನವರ ಮೇಲೆ ದ್ವೇಷವನ್ನು ಇಟ್ಟು, ಕಾರ್ಯ ಭಾಗ ಮಾಡುವದಕ್ಕೆ ಮನಸ್ಸು ಇತ್ತು. ಅಷ್ಟರಲ್ಲೇ ಗಾಯಕವಾಡ ಸರಕಾರದ ವಕೀಲನಾದ ಗಂಗಾಧರ ಶಾಸ್ತ್ರಿ ಪಟವರ್ಧನ ಎಂಬವನು ಇಂಗ್ಲಿಷಿನವರ ನಂಬಿಗೆಯಿಂದ ಬಾಜಿ ರಾವ ಸಾಹೇಬನಲ್ಲಿ ಕಾರ್ಯ ಉದ್ದಿಶ್ಯ ಬಂದು ಇದ್ದಂಥವನನ್ನು ಈ ಬಾಜಿ ರಾಯನೇ ಪಂಡರ ಪುರದ ಬಳಿಯಲ್ಲಿ ತ್ರಿಂಬಕಜಿಡೆಂಗಳೆ ಎಂಬವನ ಕೈಯಿಂದ

ರ್ಸ ೧೮೧೫ನೇ ಈಸ್ವಿಯಲ್ಲಿ ಕೊಲ್ಲಿಸಿ ಬಿಟ್ಟನು. ಇದೇ ಇಂಗ್ಲಿಷಿನವರಿಗೂ ಬಾಜಿ ರಾಯನಿಗೂ ಝುಗಳ ಬರುವದಕ್ಕೆ ಕಾರಣವಾಯಿತು.

೧೩. ಗಂಗಾಧರ ಶಾಸ್ತ್ರಿ ಬಾಜಿ ರಾವ ಸಾಹೇಬನಲ್ಲಿ ಏನು ಕಾರ್ಯದ ನಿಮಿತ್ತ ಬಂದು ಇದ್ದನು?

ಗಾಯಕವಾಡ ಸರಕಾರದಿಂದ ಬಾಜಿ ರಾವ ಸಾಹೇಬನಿಗೆ ಕೊಡ ತಕ್ಕ ಕಪ್ಪದ ಹಣ ಬಾಕಿ ನಿಂತು ಇತ್ತು. ಈ ವಿಷಯವನ್ನು ಬಗೆ ಹರಿಸಿ ಕೊಂಡು ಹೋಗ ತಕ್ಕ ಬಗ್ಗೆ ಇಂಗ್ಲಿಷ್ ಸರಕಾರದವರ ನಂಬಿಕೆಯಿಂದ ಪುಣೆಗೆ ಬಂದು ಇದ್ದನು.

೧೪. ವಕೀಲ ಗಂಗಾಧರ ಶಾಸ್ತ್ರಿಯನ್ನು ಕೊಂದ ತ್ರಿಂಬಕಜಿಡೆಂಗಳೆ ಯಾರು? ಅವನ ಸಂಗತಿ ಏನು?

ಇವನು ಮೊದಲಿಗೆ ಕೇವಲ ಚಿಕ್ಕ ಯೋಗ್ಯತೆಯಲ್ಲಿ ಇದ್ದನು, ಈಚೆಗೆ ಬಾಜಿ ರಾವ ಸಾಹೇಬ

ನು ಅವನ ಮೇಲೆ ಶಾನೆ ಪ್ರೀತಿ ಇಟ್ಟು, ದೊಡ್ಡ ದೊಡ್ಡ ಕಾರ್ಯಗಳನ್ನು ಕೊಟ್ಟು, ಅವನ್ನ ಮುಂದಕ್ಕೆ ತಂದನು.

೧೫. ಆ ವಕೀಲ ಗಂಗಾಧರ ಶಾಸ್ತ್ರಿಯನ್ನು ಕೊಂದ ತರುವಾಯ, ಈ ತ್ರಿಂಬಕಜಿಡೆಂಗಳೆಗೆ ಏನು ಅವಸ್ಥೆ ಪ್ರಾಪ್ತವಾಯಿತು?

ಆ ವಕೀಲನನ್ನು ಕೊಂದ ಕಾರಣ, ಈ ತ್ರಿಂಬಕಜಿಡೆಂಗಳೆಯನ್ನು ಬಾಜಿ ರಾವು ಸಾಹೇಬನು ಇಂಗ್ಲಿಷಿನವರಿಗೆ ಒಪ್ಪಿಸ ಬೇಕಾಗಿ ಬಂದು, ಒಪ್ಪಿಸಿ ಬಿಟ್ಟನು. ಆಗ ಇಂಗ್ಲಿಷಿನವರು ಅವನನ್ನು ಹಿಡಿದು, ಠಾಣೆ ಕೋಟೆಯಲ್ಲಿ ಹಾಕಿದರು. ಅವನು ಅಲ್ಲಿಂದ ತಪ್ಪಿಸಿ ಕೊಂಡು, ಓಡಿ ಹೋದನು.

ಸನ್ ೧೮೧೮ನೇ ಈಸ್ವಿಯಲ್ಲಿ ಇಂಗ್ಲಿಷಿನವರು ಪುನಃ ಅವನನ್ನು ಹಿಡಿದು, ಕಾಶಿ ಪ್ರಾಂತ್ಯಕ್ಕೆ ಶೇರಿದ ಚುನಾರ ಗಡ ಕೋಟೆಯಲ್ಲಿ ಆಮರಣಾಂತ ಶೆರೆಯಲ್ಲಿ ಇಟ್ಟರು.

೧೬. ತರುವಾಯ ಬಾಜಿ ರಾವ ಸಾಹೇಬನಿಗೂ ಇಂಗ್ಲಿಷಿನವರಿಗೂ ಏನು ಕೈ ಕಾಗದ ಹುಟ್ಟಿತು?

ಮೊದಲು ವಸಯಿ ಮೊಕ್ಕಾಮಿನಲ್ಲಿ ಹುಟ್ಟಿದ ಕೈ ಕಾಗದದಲ್ಲಿ ಬಾಜಿ ರಾವ ಸಾಹೇಬನಿಗೆ ಇದ್ದಂಥ ಸ್ವತಂತ್ರವು ಈ ಎರಡನೇ ಕೈ ಕಾಗದದಲ್ಲಿ ತಪ್ಪಿ ಹೋಯಿತು.

೧೭. ಬಾಜಿ ರಾವ ಸಾಹೇಬನಿಗೂ ಇಂಗ್ಲಿಷಿನವರಿಗೂ ಎರಡನೇ ಕೈ ಕಾಗದ ಹುಟ್ಟುವದಕ್ಕೆ ಕಾರಣವೇನು?

ಬಾಜಿ ರಾವ ಸಾಹೇಬನು ತಾನು ಒಪ್ಪಿ ಬರೆದು ಕೊಟ್ಟ ಮೊದಲು ಕೈ ಕಾಗದಕ್ಕೆ ವಿರೋಧವಾಗಿ ಇಂಗ್ಲಿಷಿನವರನ್ನು ಹ್ಯಾಗಾದರೂ ನಾಶನ ಮಾಡ ಬೇಕು ಎಂದು, ದ್ರೋಹ ಚಿಂತನೆ ಮಾಡಿ, ಒಳಗಿನಿಂದ ಒಳಗೆ ಹೊಸ ದಂಡನ್ನು ಕಟ್ಟುವದಕ್ಕೂ, ಬೇರೆ ರಾಜರಲ್ಲಿ ಒಳ ಹೊಕ್ಕು, ಅವರ

ಸಹಾಯವನ್ನು ಬೇಡುವದಕ್ಕೋಸ್ಕ ಹೊಕ್ಕನು. ಈ ವರ್ತಮಾನವು ಇಂಗ್ಲಿಷಿನವರಿಗೆ ತಿಳಿದು, ಹೊಸದಾಗಿ, ಒಂದು ಕ್ರೈ ಕಾಗಧವನ್ನು ಬರೆಸಿ ಕೊಂಡರು.

೧೪. ಆ ಕಾಲದಲ್ಲಿ ಹಿಂದೂಸ್ಥಾನದೊಳಗೆ ಏನು ನಡೆಯುತ್ತಿತ್ತು?

ಆ ಕಾಲದಲ್ಲಿ ಪೆಂಡಾರಿಯವರ ಹಾವಳಿಯು ಬಹಳ ಆದ್ದರಿಂದ ಇಂಗ್ಲಿಷಿನವರ ಮುಖ್ಯಾಧಿಕಾರಿಯಾದ ಗವರನರ್ ಜನರಲ್ ಸಾಹೇಬರವರು ಅವರ ಹಾವಳಿಯನ್ನು ಅಡಗಿಸ ಅವರ ಸಂಗಡ ಝಗಳ ಮಾಡುತ್ತಾ ಇದ್ದರು.

೧೫. ಇದರ ತರುವಾಯ ನಡದ ವರ್ತಮಾನವೇನು?

ಪೆಂಡಾರಿ ಜನಗಳ ಹಾವಳಿಯನ್ನು ಅಡಗಿಸುವ ಬಗ್ಯೆ ಇಂಗ್ಲಿಷಿನವರು ಘೋಡ ನದಿಯ ಥಡದಲ್ಲಿ ಇಟ್ಟಿದ್ದ ದಂಡನ್ನು ಎತ್ತಿ ಕೊಂಡು, ಹಿಂದೂಸ್ಥಾ

ನಕ್ಕೆ ಹೋದರು. ಇದೇ ಸಮಯ ಎಂದು, ಬಾಜಿ ರಾಯನು ಇಂಗ್ಲಿಷಿನವರ ಸಂಗಡ ಝುಗಳ ಮಾಡ ಹೊಕ್ಕನು.

೨೦. ಈ ಯುದ್ಧವು ಯಾವಾಗ ಮೊದಲು ಆಯಿತು? ಮತ್ತು ಹ್ಯಾಗೆ ವರ್ಣಿಸಲ್ಪಟ್ಟು ಇದೆ?

ಸರ್ ೧೮೧೭ನೇ ಈಸ್ವಿ ನವಂಬರ್ ತಿಂಗಳು ೭ನೇ ತಾರೀಖಿನಲ್ಲಿ ಈ ಯುದ್ಧಕ್ಕೆ ಮೊದಲು ಆಯಿತು. ಆಗ್ಯೆ ಬಾಜಿ ರಾಯನು ತನ್ನ ಎಲ್ಲಾ ದಂಡನ್ನು ಬಾಪು ಗೋಖಲೆ ಎಂಬವನ ಸ್ವಾಧೀನ ಮಾಡಿ ಇದ್ದನು. ಈ ಬಾಪು ಗೋಖಲೆಯು ಕೆಲವು ದಂಡನ್ನು ಎತ್ತಿ ಕೊಂಡು ಹೋಗಿ, ಖಡಕೆ ಊರಲ್ಲಿ ಇದ್ದ ಇಂಗ್ಲಿಷಿನವರ ಮೇಲೆ ಬಿದ್ದನು. ಕೆಲವು ದಿವಸಗಳ ವರಿಗೂ ಝುಗಳ ನಡೆದು, ಕಟ್ಟಕಡೆಗೆ ಮಹಾರಾಷ್ಟ್ರದವರ ಧೈರ್ಯವು ಕುಂದಿ ಹೋಯಿತು. ಈ ಝುಗಳದ ವರ್ತಮಾನವು ಜನರಲ್ ಸ್ಮಿತ ಧೊರೆಗೆ ತಿಳಿದ ಕೂಡ್ಲೆ, ಆತನು ಪೆಂಡಾರಿಯರ ಮೇಲೆ ಯುದ್ಧ ಮಾಡ ಹೋಗಿದ್ದ ತಮ್ಮ

ವಿಶೇಷ ದಂಡನ್ನು ಎತ್ತಿ ಕೊಂಡು, ಪುಣೆಗೆ ಹೊರಟನು. ತರುವಾಯ ನವಂಬರ್ ೧೭ನೇ ತಾರೀಖಿನಲ್ಲಿ ಪೇಶ್ವಾಯಿಯವರು ಇಂಗ್ಲಿಷಿನವರ ಸಂಗಡ ಒಂದು ಝುಗಳವನ್ನಾದರು ಮಾಡದೆ, ಅಲ್ಲಿಯೂ ನಿಲ್ಲದೆ, ಫಲಾಯನವಾದರು. ಆದರೂ ಅವರು ಹೊಕ್ಕ ಕಡೆ ಬೆನ್ನು ಹತ್ತಿದ ಇಂಗ್ಲಿಷಿನವರ ಹೊಡತಕ್ಕೆ ತಾಳಲಾರದೆ, ಸೊರಗೆ, ಸನ್ ೧೮೧೮ನೇ ಈಸ್ವಿ ಜೂನ್ ತಾರೀಖು ೩ರಲ್ಲು, ಬಾಜಿ ರಾಯನು ಸರ್ ಜೋನ್ ಮಾಲ್ಕಂ ಸಾಹೇಬರಿಗೆ ಶರಣಾಗತನಾಗಿ, ವರುಷ ಒಂದಕ್ಕೆ ಎಂಟು ಲಕ್ಷ ರೂಪಾಯಿಗಳನ್ನು ಮಾತ್ರ ತನಗೆ ಕೊಡುತ್ತಾ ಬರಬೇಕು, ಎಲ್ಲಾ ಶೀಮೆಯು ನೀವೇ ತೆಗೆದು ಕೊಳ್ಳಬಹುದು ಎಂದು, ಒಪ್ಪಿ ಕೊಂಡನು. ಆಗ ಇಂಗ್ಲಿಷಿನವರು ಬಾಜಿ ರಾಯನಿಗೆ ಇರ ತಕ್ಕದ್ದಕ್ಕೆ ಆತನ ಕೋರಿಕೆಯ ಮೇರಿಗೆ ಭಾಗೀರಥಿ ತೀರದಲ್ಲಿ ಇರುವ ಬ್ರಹ್ಮಾವರ್ತ ಎಂಬ ಊರಲ್ಲಿ ಇಟ್ಟರು.

೨೧. ಇಂಗ್ಲಿಷಿನವರು ಸತಾರೆಯ ಅರಸನನ್ನು ಎಲ್ಲಿ ಹಿಡಿದರು?

ಅಷ್ಟೆ ಎಂಬ ಊರಲ್ಲಿ ಇದ್ದ ಮಹಾರಾಷ್ಟ್ರ ದಂಡಿಗೆ ಅಕಸ್ಮಾತ್ತಾಗಿ ಮುತ್ತಿಗೆ ಹಾಕಿ ಅಲ್ಲಿ ಇದ್ದ ಸತಾರೆಯ ಅರಸನನ್ನು ಹಿಡಿದರು. ಆಗ ಮಹಾರಾಷ್ಟ್ರದವರ ಒಬ್ಬ ಸರದಾರ ಬಾಪು ಗೋಖಲೆ ಎಂಬವನು ಕೊಲ್ಲಲ್ಪಟ್ಟನು.

೨೨. ಬಾಜಿರಾವ ಸಾಹೇಬನು ಫಲಾಯನ ಆದಾಗ, ನಡದ ಝುಗಳದ ಸಂಗತಿ ಏನು?

ಬಾಜಿರಾವ ಸಾಹೇಬನು ಓಡಿ ಹೋದಾಗ, ಈತನ ಸೈನ್ಯವು ಭೀಮಾ ನದಿಯ ತೀರದಲ್ಲಿ ಇರುವ ಕೋರೇಗಾಂ ಎಂಬ ಊರಿನಲ್ಲಿ ಛಾವಣಿ ಮಾಡಿ ಕೊಂಡು ಇತ್ತು. ಅದೇ ಮಾರ್ಗದಿಂದ ಪುಣೆಗೆ ಹೋಗ ತಕ್ಕ ಬಗ್ಯೆ ಇಂಗ್ಲಿಷಿನವರ ಒಂದು ಪಟಾಲೂ, ೨೪ ಗೋಲಂದಾಜ ಶಿಪಾಯಿಗಳೂ, ಎರಡು ಫಿರಂಗಿಗಳೂ, ಬರುತ್ತಾ, ಅಲ್ಲಿ ಛಾವಣಿ

ಮಾಡಿ ಕೊಂಡು ಇರುವ ಬಾಜಿ ರಾಯನ ದಂಡೆ ನ್ನು ನೋಢಿ, ಅದರ ಮೇಲೆ ಬಿದ್ದು ಝುಗಳ ಮಾಡ ಹೊಕ್ಕರು. ಕೊನೆಗೆ ಇಂಗ್ಲಿಷಿನವರ ದಂಡು ಧೈರ್ಯದಿಂದ ಆ ಊರೊಳಗೆ ಹೊಕ್ಕು, ರಾತ್ರಿ ಹಗಲು ಜಾಗರೂಕರಾಗಿ ಇದ್ದು, ಬಾಜಿ ರಾಯನ ದಂಡನ್ನು ಆ ಊರ ಒಳೀಕೆ ಬರ ಗೊಡಿಸಲಿಲ್ಲ. ಆದರೆ ಆ ಝುಗಳದಲ್ಲಿ ಇಂಗ್ಲಿಷಿನವರ ಕಡೆ ೪೦೦ ಶಿಪಾಯಿಗಳೂ, ೨೦ ಜನ ಗೋಲಂದಾಜರೂ ತೀರಿ ಹೋದರು. ಈ ಝುಗಳದ ನೆನಪು ಇರುವದಕ್ಕೋಸ್ಕರ ಆ ಸ್ಥಳದಲ್ಲಿ ಒಂದು ರಣ ಕಂಭವನ್ನು ಇಂಗ್ಲಿಷಿನವರು ಕಟ್ಟಿಸಿ ಇದ್ದಾರೆ.

೨೪. ಬಾಜಿ ಸಾಹೇಬನಿಂದ ಇಂಗ್ಲಿಷಿನವರು ಮಹಾರಾಷ್ಟ್ರ ದೇಶವನ್ನು ತೆಗೆದು ಕೊಂಡ ತರುವಾಯು, ಈ ದೇಶವನ್ನು ಆಳುವದಕ್ಕೆ ಯಾರನ್ನು ನೇಮಿಸಿದರು? ಮತ್ತು ಹ್ಯಾಗೆ ಹ್ಯಾಗೆ ಮಾಡಿದರು?

ನೀರಾ ನದಿಯ ಆಚೆ ಕಡೆಗೆ ಇರುವ ದೇಶವನ್ನು ಸತಾರೆಯ ಅರಸನಿಗೆ ಕೊಟ್ಟು ಬಿಟ್ಟರು. ನಿಂತ ಎಲ್ಲಾ ದೇಶವನ್ನು ತಮ್ಮ ಸ್ವಾತ ಆಳಿಕೆಯಲ್ಲಿ ಇಟ್ಟು ಕೊಂಡು, ಈ ದೇಶದ ಒಂದು ಕಟ್ಟಗೋಸ್ಕರ ಮೊದಲು ಈ ದೇಶಕ್ಕೆ ತಮ್ಮ ಕಡೆ ವಕೀಲನಾಗಿ ಇದ್ದಂಥ ಎಲ್ಫಿಂಷ್ಟೋನ್ ಎಂಬವರನ್ನು ನೇಮಿಸಿದರು. ಈತನು ರಾಜ ನೀತಿಯಲ್ಲಿ ಬುದ್ಧಿ ಶಾಲಿಯಾಗಿಯೂ, ಶತ್ರುಗಳನ್ನು ಎದುರಿಸುವದರಲ್ಲಿ ಬಹು ಶೂರನಾಗಿಯೂ, ಜನಗಳಲ್ಲಿ ಬಹು ದಯಶಾಲಿಯಾಗಿಯೂ ಈ ದೇಶಕ್ಕೆ ಅನುಭವಶಾಲಿಯಗಿಯೂ ಇದ್ದನು. ಮತ್ತು ಆ ರಾಜಸ್ಥಾನದಲ್ಲಿ ಇದ್ದ ಚಿಕ್ಕ ದೊಡ್ಡ ಉದ್ಯೋಗಸ್ತರ ವಿಷಯದಲ್ಲಿ, ಅವರು ತಮ್ಮ ಧಣಿ ಹೋದನಲ್ಲಾ, ಮುಂದೆ ಏನು ಗತಿ? ಎಂದು ವ್ಯಸನ ಪಡದ ರೀತಿಯಲ್ಲಿ ಅವರವರ ತಾರತಮ್ಯಗಳ ಅರಿತು, ಬಹು ಚನ್ನಾಗಿ ಪರಿಪಾಲಿಸಿ ಕೊಂಡು ಬಂದನು. ಇದಲ್ಲದೆ ಕೆಲವರಿಗೆ ಉಮ್ಮಳಿ ಹಾಕಿಸಿ ಕೊ

ಟ್ಟರು; ಕೆಲವರಿಗೆ ಪಿನಿರ್ಷ ಮಾಡಿಸಿ ಕೊಟ್ಟರು. ಮತ್ತು ದೇಶ ಸಂಪ್ರದಾಯಾನುಸಾರವಾಗಿ ನಡದು ಬರುತ್ತಾ ಇದ್ದಂಥ, ದೇವದಾಯ ಬ್ರಹ್ಮದಾಯ ಮಾನ್ಯ ಮಿರಾಶಿ ಮುಂತಾದವುಗಳನ್ನು ಮೊದಲಿನಂತೆಯೇ ಸ್ಥಿರ ಪಡಿಸಿದರು. ಇದಲ್ಲದೆ ಚಿಕ್ಕ ದೊಡ್ಡ ಹಳ್ಳಿಗಳನ್ನು ಮುರಿದು, ರೈತರಿಗೆ ಬಹು ಸೌಖ್ಯವನ್ನು ಉಂಟು ಮಾಡಿ, ದೇಶದಲ್ಲಿ ನಡದು ಬರುತ್ತಾ ಇದ್ದಂಥ ಬಲಾತ್ಕಾರವನ್ನು ಬಿಡಿಸಿ, ಬಹು ಅಚ್ಚುಕಟ್ಟು ಮಾಡಿದರು. ಈ ಧೊರೆಯು ಆ ದೇಶಕ್ಕೆ ಮಾಡಿದ ಉಪಕಾರವನ್ನು ಕುರಿತು ಜನರು ಈಗಲೂ ಹಾಡಿ, ಹರಸುತ್ತಾರೆ.

ಸಂಪೂರ್ಣ.

# CATECHISM

OF THE

# GEOGRAPHY AND HISTO

OF

# MAHARASHTRA.

ಮಹಾರಾಷ್ಟ್ರ ವರ್ಣನೆ ಚರಿತ್ರೆಗ

ಪ್ರಶ್ನೋತ್ತರಗಳು.

ಬೆಂಗಳೂರು

ವೆಸ್ಲೆಯರ್ ಮಿಶನ್ ಅಚ್ಚು ಕೂಟದಲ್ಲಿ ಛಾಪಿಸಿದ್ದು

೧೮೬೮.

BANGALORE:

PRINTED BY W. W. GAUNT, AT THE WESLE

MISSION PRESS, 1868.

